ಕನ್ನಡಕಾವ್ಯಮಾಲೆ



# ಆಷಾಢಭೂತಿ

ಡಾ|| ಎ. ಎನ್. ಮೂರ್ತಿರಾವ್






ಮೈಸೂರು
ಕಾವ್ಯಾಲಯ : : ಪ್ರಕಾಶಕರು

# ಪ್ರಸ್ತಾವನೆ

ಈ ನಾಟಕವು ಮೋಲಿಯೇರ್ ಎಂಬ ಪ್ರಸಿದ್ಧ ಫ್ರೆಂಚ್ ಕವಿಯ 'ತಾರ್ತುಫ್' (Tartuffe) ಎಂಬ ನಾಟಕದ ಆಧಾರದ ಮೇಲೆ ಬರೆದದ್ದು. ಪಾಶ್ಚಾತ್ಯ ನಾಟಕಗಳನ್ನಾಗಲಿ ಕಥೆಗಳನ್ನಾಗಲಿ ಕನ್ನಡಕ್ಕೆ ತಂದು ಕೊಳ್ಳಬೇಕಾದರೆ ಮೂಲದ ಹೆಸರುಗಳು, ಅಲ್ಲಿಯ ಸನ್ನಿವೇಶ, ಇವೊಂದನ್ನೂ ಬದಲಾಯಿಸದೆ ಸಾಧ್ಯವಾದಮಟ್ಟಿಗೂ ಶಬ್ದಶಃ ಭಾಷಾಂತರಿಸಬೇಕೆಂದು ಕೆಲವರ ಮತ. ಮೂಲಗ್ರಂಥಕಾರನಿಗೆ ಅನ್ಯಾಯ ಮಾಡದಂತೆ ಕನ್ನಡಿಗರಿಗೆ ಅವನ ಗ್ರಂಥಪರಿಚಯವನ್ನು ಮಾಡಿಕೊಡಬೇಕಾದರೆ ಇದೇ ಉತ್ತಮವಾದ ಮಾರ್ಗವೆಂದು ಹೇಳಬೇಕು. ಆದರೆ ಈ ನಾಟಕದಲ್ಲಿ ಮಾಡಿರುವ ಪ್ರಯತ್ನ ಅಂಥದಲ್ಲ. ಪಾಶ್ಚಾತ್ಯ ಸಾಹಿತ್ಯದ ಪರಿಚಯವಿಲ್ಲದವರಿಗೆ ಈ ಬಗೆಯ ನಾಟಕಗಳಲ್ಲಿ ಅಭಿರುಚಿ ಹುಟ್ಟುವಂತೆ ಮಾಡುವುದೇ ಈ ಪ್ರಯತ್ನದ ಉದ್ದೇಶ. ಮೂಲದಲ್ಲಿಯ ಹೆಸರುಗಳನ್ನೂ ಸನ್ನಿವೇಶವನ್ನೂ ಇಟ್ಟುಕೊಂಡೇ ಬರೆದರೆ ನಾಟಕವು ವಿಜಾತೀಯವಾಗಿ ಕಂಡು ಜನರಿಗೆ ಮನೋರಂಜಕವಾಗಲಾರದೆಂಬ ಶಂಕೆಯುಟಾಯಿತು. ಆದ್ದರಿಂದ ಫ್ರೆಂಚ್ ನಾಟಕದ ಸಂವಿಧಾನವನ್ನು ಆದಾರವಾಗಿಟ್ಟುಕೊಂಡು, ಕಥೆಯನ್ನು ನಮ್ಮ ಸಮಾಜಸ್ಥಿತಿಗೆ ಹೊಂದಿಸಿಕೊಳ್ಳುವುದಕ್ಕೆ ಬೇಕಾದ ಬದಲಾವಣೆಗಳನ್ನು ಮಾಡಿಕೊಂಡು ಕನ್ನಡಿಗರ ಜೀವನವನ್ನು ಇದರಲ್ಲಿ ಚಿತ್ರಿಸಲು ಪ್ರಯತ್ನಿಸುವುದೇ ಉತ್ತಮವೆಂದು ತೋರಿತು. ಹೀಗೆ ಮಾರ್ಪಾಡುಗಳನ್ನು ಕಲ್ಪಿಸಿಕೊಳ್ಳುವುದರಲ್ಲಿ ಮೋಲಿಯೇರನ ಕಾವ್ಯದ ಘನತೆಯು ಹಾರಿಹೋಗಿದ್ದರೂ ಇರಬಹುದು. ಆತನಂಥ ಮಹಾಪುರುಷರು ರಚಿಸಿದ ಕಲಾವಸ್ತುಗಳ ಗೊಡವೆಗೆ ಹೋದರೆ ಅವುಗಳನ್ನು ಕೆಡಿಸದಿರುವುದು ಕಷ್ಟ.

ಫ್ರೆಂಚರ ಸಮಾಜಸ್ಥಿತಿಗೂ ನಮ್ಮ ಸಮಾಜಸ್ಥಿತಿಗೂ ಬಹಳ ವ್ಯತ್ಯಾಸವಿರುವುದರಿಂದ ಬದಲಾವಣೆಗಳನ್ನು ಮಾಡಿಕೊಳ್ಳುವ ವಿಷಯದಲ್ಲಿ ಹೆಚ್ಚು ಸ್ವಾತಂತ್ರ್ಯವನ್ನು ವಹಿಸಬೇಕಾಯಿತು. ಎರಡನೆಯ ಅಂಕದಲ್ಲಿ ಅನಂತ ಮತ್ತು ಲಲಿತ ಇವರ ಸಂವಾದವು ಸ್ವಾಭಾವಿಕವಾಗಿ ಕಾಣು

ವೃದಕ್ಕೊಳ್ಳೀಸ್ಕರ ಅವರಿಬ್ಬರೂ ಬಹಳ ವರ್ಷಗಳಿಂದಲೂ ಒಟ್ಟಿಗೆ ಬೆಳಿದವ ರೆಂದು ಭಾವಿಸಿಕೊಂಡಿದೆ. ಇಲ್ಲಿ ಸರಸ್ವತಿಯಾಗಿರುವವಳು ಫ್ರೆಂಚ್ ನಾಟಕ ದಲ್ಲಿ ಮನೆಯ ಕೆಲಸಕ್ಕಿರುವ ಹೆಂಗಸು. ಊಳಿಗಕ್ಕಿರುವವಳು ಮನೆಯುವರ ಗುಟ್ಟು ವಿಷಯುಗಳಲ್ಲೆಲ್ಲಾ ಸ್ವಾತಂತ್ರ್ಯವನ್ನು ವಹಿಸಿ ಮಾತನಾಡುವುದು ನಮ್ಮ ಸಮಾಜದಲ್ಲಿ ಅಸಂಭವವಾದ್ದರಿಂದ ಇಲ್ಲಿ ಆಕೆ ಶಂಕರಪ್ಪನ ಮಗ ಳಾಗಿರುವಳು. ಈ ಬದಲಾವಣೆಗೆ ತಕ್ಕಂತೆ ಪಾತ್ರಗಳ ಸ್ವಭಾವದಲ್ಲಿಯೂ ಸ್ವಲ್ಪ ವ್ಯತ್ಯಾಸ ಕಂಡುಬರಬಹುದು

ಮೂರನೆಯ ಮತ್ತು ನಾಲ್ಕನೆಯ ದೃಶ್ಯಗಳಲ್ಲಿ ಮುಖ್ಯವಿಷಯ ಮೂಲದಲ್ಲಿಯೂ ಇಲ್ಲಿಯೂ ಒಂದೇ ಆದರೂ, ಬರೆಯುವಾಗ ಬಹುಮಟ್ಟಿಗೆ ಮೂಲವನ್ನು ಮರೆತೇ ಬರೆಯಬೇಕಾಯಿತು ಕೊನೆಯ ದೃಶ್ಯದಲ್ಲಿಯೂ ಕೆಲವು ವ್ಯತ್ಯಾಸಗಳು ಅವಶ್ಯವಾಗಿ ಕಂಡುಬಂದವು. ಶಂಕರಪ್ಪನನ್ನು ಕಷ್ಟಕ್ಕೆ ಸಿಕ್ಕಿಸಿದ್ದೇನೋ ಆಯಿತು; ಅವನನ್ನು ಪಾರುಮಾಡಿಸುವುದು ಹೇಗೆಂಬ ದೊಡ್ಡ ಸಮಸ್ಯೆ ಬಂದೊದಗಿತು. ಈ ಸಮಸ್ಯೆ ಮೂಲ ದಲ್ಲಿಯೂ ಸರಿಯಾಗಿ ಪೂರ್ಣವಾಗಿದೆಯೆಂದು ಹೇಳಲಾಗುವುದಿಲ್ಲ. ಅಲ್ಲಿ ಕೊನೆಯ ಪುಟದಲ್ಲಿ ರಾಜನ ಕಡೆ ಅಧಿಕಾರಿಯೊಬ್ಬನು ಬಂದು "ನಮ ದೊರೆಯು ತಾರ್ತುಫ್ (ಇಲ್ಲಿಯ ಸುಬ್ಬಾಶಾಸ್ತ್ರಿ) ನಂಥ ಕಪಟಿಗ ಮಾತನ್ನು ನೆಚ್ಚುವವನಲ್ಲ. ಆತನ ಆಳಿಕೆಯಲ್ಲಿ ಸಜ್ಜನರಿಗೆ ಏನ ಭಯವಿಲ್ಲ" ಎಂದು ಹೇಳಿ ಎಲ್ಲವನ್ನೂ ಸರಿಪಡಿಸಿಬಿಡುವನು. ಇ ಆದಕ್ಕೆ ಬದಲಾಗಿ ಪೋಲೀಸಿನವರು ಮೊದಲಿನಿಂದಲೂ ಸುಬ್ಬಾಶಾಸ್ತ್ರಿ ಮೇಲೆ ಕಣ್ಣಿಟ್ಟದ್ದರಿಂದು ಮೂರನೆಯ ದೃಶ್ಯದಲ್ಲೇ ಸೂಚನೆಕೊಟ್ಟು ಮೂಲಕ ಕೊನೆಯಲ್ಲಿ ಎಲ್ಲವೂ ಸರಿಹೋಗಬಹುದೆಂಬ ನಿರೀಕ್ಷೆ ಪ್ರೇಕ್ಷಕ ಮನಸ್ಸಿಗೆ ಬರುವಂತೆ ಮಾಡಬೇಕೆಂದು ಪ್ರಯತ್ನಿಸಿದೆ.

ಈ ನಾಟಕವನ್ನು ಮೊದಲು ಮೈಸೂರು ವಿಶ್ವವಿದ್ಯಾನಿಲಯ ಸಂ ದವರು ಸಂಘದ ವಾರ್ಷಿಕೋತ್ಸವ ಸಮಯದಲ್ಲಿ ಅಭಿನಯಿಸಿದರು. ಅ ನಯಿಸುವುದಕ್ಕೆ ಮಣ್ಣನ್ನಾದರೂ ಚಿನ್ನವಾಗಿ ಮಾಡುವಂಥ ನಟರು ಸಿ ದರು. ಅವರು ನಾಟಕವನ್ನಾಡಿವ ಮೇಲೆ ಅದರಲ್ಲಿ ಮಾಡಬೇಕಾಗಿದ್ದ ಕೆಲ ಮಾರ್ಪಾಡುಗಳು ಹೊಳೆದವು. ಈ ಮಹನೀಯರಿಗೂ, ಇದನ್ನು ತ ಪತ್ರಿಕೆಯಲ್ಲಿ ಪ್ರಕಟಿಸಿದ 'ಪ್ರಬೋಧಕ' ಮಾಸಪತ್ರಿಕೆಯ ಸಂಪಾದಕರಿಗ

ಪುಸ್ತಕರೂಪದಲ್ಲಿ ಪ್ರಕಟಿಸಿ ನನಗೆ ಉತ್ತೇಜನ ಕೊಟ್ಟ ಮೈಸೂರು ಮಹಾರಾಜರವರ ಕಾಲೇಜಿನ ಕರ್ಣಾಟಕ ಸಂಘದವರಿಗೂ ನಾನು ಋಣಿಯಾಗಿದ್ದೇನೆ.

ಈ ಗ್ರಂಥವು ರಚಿತವಾದಂದಿನಿಂದಲೂ ಇದರ ವಿಷಯದಲ್ಲಿ ಒಂದೇ ರೀತಿಯ ಅಭಿಮಾನವನ್ನು ತೋರಿಸಿ ಪ್ರೋತ್ಸಾಹಿಸಿದ್ದಕ್ಕಾಗಿ ಕರ್ಣಾಟಕ ಸಂಘದ ಉಪಾಧ್ಯಾಯರಾದ ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರಿಗೂ, ಪುಸ್ತಕವು ಮುದ್ರಣದಲ್ಲಿದ್ದಾಗ ಕರಡು ಅಚ್ಚಿನ ಪ್ರತಿಗಳನ್ನು ತಿದ್ದಿ ಉಪಯುಕ್ತವಾದ ಸಲಹೆಗಳನ್ನು ಕೊಟ್ಟ ನನ್ನ ಮಿತ್ರರು ಶ್ರೀಮಾನ್ ತೀ. ನಂ ಶ್ರೀಕಂಠಯ್ಯನವರಿಗೂ ನಾನು ಬಹಳ ಕೃತಜ್ಞನಾಗಿದ್ದೇನೆ.

ಎ. ಎನ್. ಮೂರ್ತಿರಾವ್

# ಪಾತ್ರಗಳು

| | |
|---|---|
| ಶಂಕರಪ್ಪ | ಮಂಡ್ಯದಲ್ಲಿ ಜಮೀನುದಾರ |
| ರಾಮು | ಅವನ ಮೊದಲನೆಯ ಹೆಂಡತಿಯ ಮಗ |
| ಕೃಷ್ಣಮೂರ್ತಿ | ಅವನ ಭಾವಮೈದುನ |
| ಅನಂತ | ಶಂಕರಪ್ಪನ ಮನೆಯಲ್ಲಿ ಬೆಳೆದವನು, ಲಲಿತೆ<br>ಗೊತ್ತಾಗಿದ್ದ ವರ |
| ಸುಬ್ಬಾಶಾಸ್ತ್ರಿ | "ಆಷಾಢಭೂತಿ" |
| ಶ್ರೀನಿವಾಸರಾಯ | ಪೋಲೀಸ್ ಇನ್ಸ್‌ಪೆಕ್ಟರು |
| ಗೋವಿಂದಯ್ಯ | ಅಮೀನ |
| ಮಾದ | ಆಳು |
| ಪಾರ್ವತಮ್ಮ | ಶಂಕರಪ್ಪನ ತಾಯಿ, ವಿಧವೆ |
| ಶಾರದೆ | ಶಂಕರಪ್ಪನ ಎರಡನೆಯ ಹೆಂಡತಿ |
| ಸರಸ್ವತಿ<br>ಲಲಿತ } | ಶಂಕರಪ್ಪನ ಮೊದಲನೆಯ ಹೆಂಡತಿಯ ಮಕ್ಕ |

ಜಟಕಾದವನು; ಇಬ್ಬರು ಕಾನ್ಸ್‌ಟೆಬಲರು

ಸ್ಥಳ: ಮಂಡ್ಯದಲ್ಲಿ ಶಂಕರಪ್ಪನ ಮನೆ

# ಆಷಾಡಭೂತಿ

## ಮೊದಲನೆಯ ದೃಶ್ಯ

[ಶಂಕರಪ್ಪನವರ ಮನೆ ನೋಡಿದರೆ ಮನೆಯವರು ಸ್ವಲ್ಪ ಅನುಕೂಲಸ್ಥರೆಂದು ಹೇಳುವಂತಿದೆ. ಮನೆಯ ಹಜಾರದಲ್ಲಿ ಗೋಡೆಯ ಹತ್ತಿರ ಒಂದು ಮೇಜು. ಅದರ ಬಳಿಯಲ್ಲಿ ಒಂದು ಕುರ್ಚಿಯ ಮೇಲೆ ಕೃಷ್ಣಮೂರ್ತಿ. ಅವನಿಗೆ ಸುಮಾರು ಇಪ್ಪತ್ತೆರಡು ವರ್ಷ. ಅವನ ಪಕ್ಕದಲ್ಲಿ ಮೇಜಿನ ಮೇಲೆ ರಾಮು ಕಾಲು ಆಡಿಸುತ್ತಾ ಕುಳಿತಿದ್ದಾನೆ. ಅವನು ಕೃಷ್ಣಮೂರ್ತಿಗಿಂತ ಐದಾರು ವರ್ಷ ಚಿಕ್ಕವನು. ಇಬ್ಬರೂ 'ಕ್ರಾಪು' ಬೈತಲೆ ತೆಗೆದುಕೊಂಡಿದ್ದಾರೆ. ಕೃಷ್ಣಮೂರ್ತಿ ಷರಟನ್ನೂ ರಾಮುವು ಅರ್ಧತೋಳಿನ ಟೆನಿಸ್ ಶರಟನ್ನೂ ಹಾಕಿಕೊಂಡಿದಾರೆ. ಇಬ್ಬರಿಗೂ ಸ್ವಲ್ಪದೂರದಲ್ಲಿ ಇನ್ನೊಂದು ಕುರ್ಚಿಯ ಬೆನ್ನನ್ನು ಹಿಡಿದುಕೊಂಡು ಸರಸ್ವತಿಯೂ ಅವಳ ಹತ್ತಿರದಲ್ಲಿಯೇ ಲಲಿತೆಯೂ ನಿಂತಿದ್ದಾರೆ. ಸರಸ್ವತಿ ಹದಿನೆಂಟು ಹತ್ತೊಂಬತ್ತು ವರ್ಷದ ಯುವತಿ; ಧರ್ಮಾವರದ ಸೀರೆಯನ್ನು ಉಟ್ಟಿದ್ದಾಳೆ. ಲಲಿತ ಅಂದವಾಗಿರುವ ಕೃತಕರೇಷ್ಮೆಯ ಸೀರೆಯನ್ನುಟ್ಟಿದ್ದಾಳೆ. ಅವಳಿಗೆ ಹದಿಮೂರು ವರ್ಷ. ಅಕ್ಕ ತಂಗಿಯರಿಬ್ಬರೂ ಚೆಲುವೆಯರು.

ಪಾರ್ವತಮ್ಮ–ಅರವತ್ತು ವರ್ಷದ ಮುದುಕಿ-ಒಂದು ಮಡಿಪೆಟ್ಟಿಗೆಯನ್ನು ಕಂಕುಳಲ್ಲಿ ಇರಿಕಿಕೊಂಡು ಹೊರಡಲನುವಾಗಿದಾಳೆ. ಶಾರದೆ ಆಕೆಯನ್ನು ತಡೆಯುತ್ತಿದಾಳೆ. ಶಾರದೆಗೆ ಸುಮಾರು ಇಪ್ಪತ್ತೈದು ವರ್ಷ: ರೂಪವತಿ: ಮೂರು ಬೆರಳಂಚಿರುವ ನಾಜೂಕಾದ ರೇಷ್ಮೆಯ ಸೀರೆಯನ್ನುಟ್ಟಿದಾಳೆ.

ಬಾಗಿಲಿನ ಬಳಿ ನೆಲದ ಮೇಲೆ ಒಂದು ಗಂಟನ್ನು ಇಟ್ಟುಕೊಂಡು ಮಾದ ನಿಂತಿದಾನೆ.]

ಪಾರ್ವತಮ್ಮ—ನಡೆಯೋ, ಮಾದ, ಆ ಗಂಟು ತಗೊಂಡು. ಏನು ನೋಡುತಾ ನಿಂತಿದೀಯೆ?

(ಮಾದ ಗಂಟು ಎತ್ತಿಕೊಂಡು ನಿಲ್ಲುತ್ತಾನೆ.)

ಶಾರದೆ—ಸ್ವಲ್ಪ ತಡೆಯಬಾರದೆ, ರಾಮು ಸ್ಟೇಷನ್ನಿಗೆ ಬರುತಾನೆ.

ಪಾರ್ವತಮ್ಮ—ರಾಮುವೂ ಬೇಡ, ಗೀಮುವೂ ಬೇಡ. ನನಗ್ಯಾಕನ್ಮ ಈ ಮರ್ಯಾದೆಯೆಲ್ಲ? ನನ್ನ ಜೊತೆಗೆ ಯಾರೂ ಬರಬೇಕಾಗಿಲ್ಲ.

ಶಾರದೆ—ಅದೇಕೆ ಹಾಗಂತೀರಿ? ಸ್ಟೇಷನ್ನಿಗೆ ಬಂದು ರೈಲು ಹತ್ತಿಸಿಬಿಟ್ಟು ಬರುತಾನೆ. ಅವರು ಊರಿಗೆ ಬರುವ ತನಕ ಇದ್ದೇ ಹೋಗಬಹುದಾಗಿತ್ತು. ಅವಸರದಲ್ಲಿ ಹೊರಟುಬಿಟ್ಟದೀರಿ.

ಪಾರ್ವತಮ್ಮ—ನಿಮ್ಮ ಮನೆ ಆಡಳಿತ ನಾನು ಕಣ್ಣಲ್ಲಿ ನೋಡಲಾರೆ ಕಣೆ. ಸಾಕಾಗಿದೆ ನನಗೆ! ನಿಮ್ಮೊಬ್ಬರ ನಡತೆಯೂ ನನಗೆ ಸರಿಬೀಳೋದಿಲ್ಲ. ಇಷ್ಟಕ್ಕೂ ನನಗೆ ಸರಿಬಿದ್ದರೆಷ್ಟು, ಇಲ್ಲದಿದ್ದರೆಷ್ಟು! ನನ್ನ ಮಾತು ಕೇಳೋರು ಯಾರು! ನಾನು ಯಾವ ಊರ ಹಾಳೆ! ನಾನು ಇಲ್ಲಿದ್ದು ಏನಾಗಬೇಕಾಗಿದೆಯಮ್ಮ! (ಮಾದನ ಕಡೆಗೆ ತಿರುಗಿ) ನಡೆಯೋ!

ಸರಸ್ವತಿ—ಹಾಗಂದರೇನು ಅಜ್ಜಿ, ನಾವೆಲ್ಲಾ........

ಪಾರ್ವತಮ್ಮ—ನಿನ್ನ ಯಾರು ಕರೆಸಿದರೆ ಇಲ್ಲಿ? ಮಾತು ಹಾಕಿಕೊಂಡು ಬಂದಳು ಯಜಮಾನಿತಿಯ ಹಾಗೆ. ಎಲ್ಲಾತಕ್ಕೂ ಬಾ ನನ್ನ ಹಲ್ಲು ಮುತ್ತೈದೆ ಅಂತ.

ರಾಮು—ಅದೇಕೆ ಅಜ್ಜಿ. ನಿನಗೆ ಅಷ್ಟೊಂದು ಕೋಪ....

ಪಾರ್ವತಮ್ಮ—ಸುಮ್ಮನಿರೋ ಸಾಕು, ನನಗೆ ಬುದ್ಧಿ ಹೇಳುವುದಕ್ಕೆ ಬರಬೇಡ. ನಿನಗಿಂತ ಅಷ್ಟು ವರ್ಷ ಮುಂಚೇನೇ ಹುಟ್ಟಿದವಳು ನಾನು. ನೀನೇನು ಮಾಡೀಯೆ ಹೇಳು! ನಿನಗೆ ಅಂಕೆಯಿಲ್ಲ, ಶಿಕ್ಷೆಯಿಲ್ಲ. ನಿಮ್ಮಪ್ಪನಿಗೆ ಒಂದು ಸಾವಿರ ಸಲ ಹೇಳಿದೇನೆ! ಬೇಡಾ, ಹೀಗೆ ಬಿಟ್ಟರೆ ಅವನು ಹೆತ್ತವರಿಗೆ ಮಾನ ತರುವುದಿಲ್ಲ, ಕೆಟ್ಟು ಬೂದಿ ಹುಯ್ಕೊಂಡು ಹಾಳಾಗಿ ಹೋಗುತಾನೆ ಅಂತ. ಕೇಳಲಿಲ್ಲ ಅವನು.

ಲಲಿತ—ಅವನೇನೂ ಅನ್ನಲಿಲ್ಲ ಅಜ್ಜಿ, ಸುಮ್ಮನೆ ಯಾಕೆ.....

ಪಾರ್ವತಮ್ಮ—ಸಾಕು ಕಣೆ, ಮಾಯಾಂಗನೆ! ಅಬ್ಬಬ್ಬ! ನೀನೇನು ಸಾಮಾನ್ಯಳೆ! ಲೋಕ ತಲೆಕೆಳಗು ಮಾಡಿಬಿಟ್ಟೀಯೆ; ಓದು ಬರಾವು ಕಲಿತವಳು ನೀನು! ಹೆಂಗಸಿಗ್ಯಾಕೋ ಓದುಬರಾವು ನಾ ಕಾಣೆ. ಇಸ್ಕೂಲಿಗೆ ಹಾಕಬೇಡ ಕಣೋ ಅಂದೆ. ನನ್ನಂಥ ಮುದಿಗೂಬೆಯ ಮಾತು ಯಾರಿಗೆ ಲಕ್ಷ್ಯ! ಹಾಳಾದ್ದು ನನ್ನ ಬಾಯಿ ಸುಮ್ಮನಿರೋದಿಲ್ಲ.

(ಲಲಿತ ಸ್ವಲ್ಪ ಕಿರುನಗೆ ನಗುತ್ತಾ ಹೊರಟು ಹೋಗುತ್ತಾಳೆ.)

ಶಾರದೆ— ಕೋಪಮಾಡಬೇಡಿ ಅತ್ತೆಮ್ಮ. ಏನೋ ಹುಡುಗರು.....

ಪಾರ್ವತಮ್ಮ—ಸುಮ್ಮನೆ ಯಾಕೆ ನನ್ನ ಕೈಲಿ ಮಾತಾಡಿಸುತೀರೆ? ನೀನೂ ಏನಿನ್ನೂ ಹುಡುಗಿ ಅಂದುಕೊಂಡಿದೀಯಾ? ಈ ಹುಡುಗರಿಗೆಲ್ಲಾ ಹಾಗಲ್ಲ ಹೀಗೆ ಅಂತ ಬುದ್ಧಿ ಹೇಳಬೇಡವೆ? ಅವರನ್ನು ಬದುಕಿದ್ದರೆ ಹೀಗೆ ಹೋದ ದಾರಿಯಲ್ಲಿ ಬಿಡುತಾ ಇದ್ದಳೆ! ನೀನು ತಾನೆ ಖರ್ಚಿನಲ್ಲಿ ಸ್ವಲ್ಪ ಹಿಡಿತ ಬೇಡವೆ? ನಿಮ್ಮ ಮೆರೆತಕ್ಕೆಲ್ಲಾ ಶಂಕರ ಎಲ್ಲಿಂದ ತಂದು ಒದಗಿಸಿಯಾನು? ಅವನೇನು ಉಳಿಯಬೇಕೋ ಮನೆ ಮಾರಿಕೊಂಡು ಹೋಗಬೇಕೋ? ನೀನೇನು ದೊರೆ ಹೆಂಡತಿ ಅಂದು ಕೊಂಡಿದೀಯೇನೊ! ಗಂಡನ ಮನೇಲಿ ಗರತಿಯಾಗಿ ಬಾಳೋಳಿಗೆ ಈ ಸೀರೆ ಆಡಾವುಡಿ ಯಾಕೋ ನಾ ಕಾಣೆ.

ಶಾರದೆ—ಮೈಮುಚ್ಚ ಲಕ್ಷಣವಾಗಿ ಒಂದು ಸೀರೆ ಉಟ್ಟುಕೊಳ್ಳಬೇಕಾದರೆ ದೊರೆ ಹೆಂಡತಿಯೇ ಆಗಬೇಕೆ!

ಕೃಷ್ಣಮೂರ್ತಿ—ಏನೋ, ಅಜ್ಜಮ್ಮ, ಒಂದು ಒಳ್ಳೆಯ ಸೀರೆ.....

ಪಾರ್ವತಮ್ಮ—ನಿಮ್ಮಕ್ಕನ ಕಡೆಗೆ ನೀನು ವಹಿಸಿಕೊಂಡು ಬರದಿದ್ದರೆ ಆಗುತ್ತಿಯೆ? ದೊಡ್ಡ ಮನುಷ್ಯರ ಮಗ ಕಣಪ್ಪ ನೀನು. ನಿನ್ನ ಮಾತಿಗೂ ನನ್ನ ಮಾತಿಗೂ ಹೊಂದುವಣೆಯಾಗೋದಿಲ್ಲ.

ಸರಸ್ವತಿ—ಅಜ್ಜಿ, ನೀನು ಆ ಸುಬ್ಬಾಶಾಸ್ತ್ರಿಗಳು ನಮ್ಮ ಮೇಲೆ ಹೇಳಿದ್ದು ಕೇಳಿಕೊಂಡು.....

ಪಾರ್ವತಮ್ಮ—ಅವರು ದೇವರಂಥ ಮನುಷ್ಯರು ಕಣೆ. ಅವರ ಹೆಸರು ಸ್ಮರಣೆಮಾಡಿದರೆ ನಿಮ್ಮ ಜನ್ಮ ಪಾವನವಾದೀತು.

ರಾಮು—ನೀನು ಅಣ್ಣ ಇಬ್ಬರೂ ಸೇರಿಕೊಂಡು ಅವನ್ನ ಮನೆಗೆ ಯಜಮಾನನ್ನ ಮಾಡಿ ಕೂರಿಸಿದೀರಿ. ಈಗ ನಾವು ಕೂರುವುದಕ್ಕೆ ನಿಲ್ಲುವುದಕ್ಕೆ ಅವನ ಅಪ್ಪಣೆಯಾಗಬೇಕು.

ಸರಸ್ವತಿ—ನಾವು ಏನು ಮಾಡುತ್ತಿದ್ದರೂ ತಪ್ಪು ಹುಡುಕಿಕೊಂಡು ಬರುತ್ತಾನೆ.

ಪಾರ್ವತಮ್ಮ—ಅವರ ಮಾತು ಕೇಳಿದ್ದರೆ ನೀವೆಲ್ಲಾ ಹೀಗಿರುತಾ ಇದ್ದಿರಾ? ಅವರು ಹೇಳುವ ಹಾಗೆ ನಡಕೊಂಡರೆ ಇಹಕ್ಕೆ ಸುಖ, ಪರಕ್ಕೆ ಗತಿ. ಶಂಕರನ್ನ ನೋಡು, ಅವರಿಟ್ಟ ಗೆರೆ ದಾಟುವುದಿಲ್ಲ.

ರಾಮು—ಅಣ್ಣ ಬೇಕಾದರೆ ಅವನ್ನ ಅಟ್ಟದ ಮೇಲೆ ಕೂರಿಸಿ ಪೂಜೆಮಾಡಲಿ.

ನನಗೆ ಅವನ್ನ ಕಂಡರೆ ಮೈಯೆಲ್ಲಾ ಉರಿಯುತ್ತೆ. ಇನ್ನೊ
ಸಲ ಏನಾದರೂ ನನ್ನ ಕೆಣಕಲಿ, ಮುಖದ ನೀರಿಳಿಕಿ ಕಳಿಸಿ
ತೇನೆ.

ಸರಸ್ವತಿ—ಮೈಮುಚ್ಚ ಹೊದ್ದುಕೊಳ್ಳುವುದಕ್ಕೆ ಒಂದು ಬಟ್ಟೆಗೆ ಗತಿಯಿ
ತಿರುಗುತಾ ಇದ್ದ. ಈಗ ನಮ್ಮ ಮೇಲೆ ಯಜಮಾನಿಕೆ ನ
ತಾನೆ ಇವನು ಯಾರು ನಮ್ಮನ್ನ ಅನ್ನೋದಕ್ಕೆ?

ಪಾರ್ವತಮ್ಮ—ನಿಮಗೆ ಒಳ್ಳೆಯದಕ್ಕೇ ಹೇಳುತಾರೆ ಕಣೆ!

ಸರಸ್ವತಿ—ಅಜ್ಜಿ, ನೀನೇನೋ ಅವನು ಮಹಾ ವಿರಕ್ತ, ಯೋಗಿ ಅಂತ ತಿ
ಕೊಂಡಿದೀಯೆ. ಅದೆಲ್ಲಾ ಬರಿಯ ಬೂಟಾಟಿಕೆ.

ಪಾರ್ವತಮ್ಮ—ಬೇಡ ಕಣೆ, ಹಾಗೆ ಅವರನ್ನ ದೂಷಣೆ ಮಾಡಬಾರ
ಅವರ ಕಾಲು ತೊಳೆದು ತೀರ್ಥ ತೆಗೆದುಕೊಳ್ಳಬೇಕು. ನಮ್ಮಂಥ
ಪಾಪದ ದಾರಿ ಬಿಟ್ಟು ಮುಕ್ತಿಗೆ ಸಾಧನವಾಗುವ ಕೆಲಸಮಾಡಿ
ಅವರು ಹೇಳುವುದು. ನಿಮ್ಮ ಅನಾಚಾರ ನೋಡಿ ತಿದ್ದಿಕೊ
ಅಂತ ಅವರು ಒಂದು ಮಾತು ಹೇಳುತ್ತಾರಲ್ಲ. ಅದಕ್ಕೆ ನಿಮಗೆ
ದ್ವೇಷ, ಅವರನ್ನ ಕಂಡರೆ.

ಸರಸ್ವತಿ—ಅನಾಚಾರ! ನಿನ್ನೆ ನಾವು ನಾಲ್ಕು ಜನ ಕೂತುಕೊಂಡು ಮಾ
ಡುತಾ ಇದ್ದರೆ ಅದಕ್ಕೆ ಇವನ ಆಕ್ಷೇಪಣೆ. ಅದು ಅನಾಚಾರವೇ
ಇವನು ಮಹಾ ಸತ್ಪುರುಷ!

ಪಾರ್ವತಮ್ಮ—ಸುಮ್ಮನಿರೆ, ಕಂಡಿದಾರೆ. ಅಂಥವರ ಮೇಲೆ ಹೀಗೆ
ಅನ್ಯಾಯ ಆಡಿದರೆ ನಾಲಗೆಯಲ್ಲಿ ಹುಳು ಸುರಿದೀತು! ಅ
ಆಕ್ಷೇಪಣೆ ಮಾಡುವುದು ಹೆಚ್ಚೆ, ಈ ಮನೆಯ ಗಲಾಟೆ ನೋಡಿ
ಸದಾ ಯಾರಾದರೂ ಬರುತ್ತಲೇ ಇರುತಾರೆ. ಮನೆಯ ಮು
ಯಾವಾಗಲೂ ಗಾಡಿ ನಿಂತೇ ಇರುತ್ತೆ. ಇದನ್ನೆಲ್ಲಾ ನೋಡಿ
ಶಾಸ್ತ್ರಿಗಳು ಅನ್ನುವುದು ಹಾಗಿರಲಿ, ಊರಿನವರೆಲ್ಲಾ ಆಡಿಕೊ
ತಾರೆ.

ಕೃಷ್ಣಮೂರ್ತಿ—ಚೆನ್ನಾಯಿತು ಅಜ್ಜಮ್ಮ, ಜನಗಳ ಬಾಯಿ ಕಟ್ಟೋ
ಯಾರು? ಅವರು ಆಡಿಕೊಳ್ಳುತಾರೆ ಅಂತ ಮನೆಗೆ ಬಂದ ಸ್ನೇ
ರನ್ನ ಓಡಿಸಿಬಿಡುವುದಕ್ಕಾಗುತ್ತೆಯೆ! ಜನಗಳಿಗೇನು, ಇದ

ಇದ್ದರೆ ಇನ್ನೇನಾದರೂ ತಪ್ಪು ಹುಡುಕುತಾರೆ. ನಮ್ಮ ಮನಸ್ಸು ಒಪ್ಪುವ ಹಾಗೆ ನಾವು ನಡೆದರೆ ಸರಿ.

ರಸ್ವತಿ—ಯಾರು ಈಗ ನಮ್ಮನ್ನ ಆಡಿಕೊಳ್ಳೋರು? ಆಚೆ ಮನೆ ನಂಜಮ್ಮನವರು ತಾನೆ? ಅವರ ಮನೆಯ ವಿಷಯ ಯಾರಿಗೂ ಗೊತ್ತಿಲ್ಲವೇನೋ! ತಮ್ಮ ಮಾತು ಯಾರಾದರೂ ಎತ್ತಿಯಾರು ಅಂತ ಇತರರ ಮೇಲೆ ದೂರು ಹೊರಿಸುವುದು!

ಾರ್ವತಮ್ಮ— ಅವರ ಮಾತು ಯಾಕೆ ನಿನಗೆ? ಮಾಡಿದವರ ಪಾಪ ಆಡಿದ ವರ ಬಾಯಲಿ ಅಂತ ಕೇಳಿಲ್ಲವೆ? ನಂಜಮ್ಮ ಹಾಗಿರಲಿ, ಸಾವಿತ್ರ ಮ್ಮನ್ನ ನೋಡು. ಅರುಂಧತಿ ಹಾಗಿದಾಳೆ ಅವಳೂ ಆಡಿಕೊಳ್ಳುತಾ ಇದ್ದಳು ನಿನ್ನೆ ಈ ಮನೆ ವಿಚಾರಾನ.

ಾಮು—(ಪಾರ್ವತಮ್ಮನ ಧ್ವನಿಯನ್ನು ಅನುಕರಿಸಿ) ಅರುಂಧತಿ! ಅರವತ್ತು ವರ್ಷವಾದ ಮೇಲೆ ಅರುಂಧತಿಯಲ್ಲದೆ ಇನ್ನೇನು?

ಾರ್ವತಮ್ಮ—ಶಾರದೆ, ಇದೆಲ್ಲಾ ಯಾಕಮ್ಮ, ನಿಮ್ಮ ನಡತೆ ನನಗೆ ಒಪ್ಪು ವುದಿಲ್ಲ. ಮನೆಯಲ್ಲಿ ಯಾವಾಗ ನೋಡಿದರೂ ಲಲ್ಲೆ, ಸಂಗೀತ...

ಾಮು—(ವ್ಯಂಗ್ಯವಾದ ಧ್ವನಿಯಿಂದ) ಒಂದು ಪುರಾಣವಿಲ್ಲ, ಒಂದು ಪುಣ್ಯ ಕಥೆಯಿಲ್ಲ.....

ಾರ್ವತಮ್ಮ—(ರೇಗಿಕೊಂಡು ಅವನ ಕಡೆಗೆ ತಿರುಗಿ ಕೀರಲುಧ್ವನಿಯಿಂದ) ಹೌದು, ಹೌದು, ಒಂದು ಪುರಾಣವಿಲ್ಲ, ಒಂದು ಪುಣ್ಯ ಕಥೆಯಿಲ್ಲ! ಸದಾ ಏನೋ ಕಾಡುಹರಟೆಯಲ್ಲಿ ಕಾಲ ಕಳೆಯುತ್ತೀರಿ! (ರಾಮು ನಗುತ್ತಾ ಇರುವುದನ್ನು ಕಂಡು ಕೋಪ ಮಿತಿಮೀರಿ) ಅಲ್ಲಿ ನೋಡು, ನಗುತಾ ಕೂತಿರುವುದನ್ನು! ಅದೇನು ಕಂಡೆಯೋ ಹಲ್ಲು ಕಿರಿಯುವು ದಕ್ಕೆ? ಇಲ್ಲೇನು ಕಪಿ ಕುಣಿಯುತಾ ಇದೆಯೆ? ಸಾಕಮ್ಮ ಈ ಮನೆ ಇಸ್ನು. ಇಲ್ಲಿ ಒಂದು ಪಂಚಪಾತ್ರೆ ಗಂಗಾಮೃತ ಕುಡಿದರೆ ಕೇಳು.... ತಿರುಗಿ ಈ ಹೊಸಲು ಮೆಟ್ಟಿದರೆ ಕೇಳು..... (ಮಾದನ ಕಡೆಗೆ ತಿರುಗಿ) ನಡೆಯೋ ಗಂಟು ತಗೊಂಡು, ಎಷ್ಟು ಸಲ ಹೇಳುವುದು?

(ಮಾದ, ಬೇಜಾರಾಗಿ ಗಂಟನ್ನು ಆಗತಾನೆ ಕೆಳಕ್ಕೆ ಇರಿಸುತ್ತಿದ್ದವನು ುನಃ ಅದನ್ನು ಸರ್ರನೆ ಎತ್ತಿಕೊಂಡು ಹೋಗುವನು. ಪಾರ್ವತಮ್ಮನೂ ಅವಳ ಂದೆ ಶಾರದೆಯೂ ಹೋಗುವರು.

ರಾಮು— ಏನೂ ಕಾರಣವಿಲ್ಲದೆ ಇದ್ದರೂ ಅದೇನು ಕೋಪ ಬಂದುಬಿಟ್ಟಿತು!

ಕೃಷ್ಣಮೂರ್ತಿ— ಏನೂ ಕಾರಣವಿಲ್ಲ ಅನ್ನುವ ಹಾಗಿಲ್ಲ ಬಿಡು. ನೀನು ಎದುರಿಗೆ ಕೂತುಕೊಂಡು ಮಂಗನ ಹಾಗೆ ಅಣಕಿಸಿ ಹಲ್ಲು ಕಿರಿದರೆ ರೇಗದೆ ಇರುತ್ತೆಯೆ!

ರಾಮು—ನಿಜ ಅನ್ನು; ಆದರೂ ಆ ಸುಬ್ಬಾಶಾಸ್ತ್ರಿಯ ಮಾತೆತ್ತುತ್ತಲೆ ಉರಿಯುವ ಬೆಂಕಿಗೆ ತುಪ್ಪ ಸುರಿದ ಹಾಗಾಯಿತು. ಇವರಿಗೆಲ್ಲಾ ಅದೇನೋ ಹುಚ್ಚು ಹಿಡಿಸಿಬಿಟ್ಟಿದಾನೆ ಅವನು

ಸರಸ್ವತಿ—ಅಣ್ಣನ ಮಾತು ಕೇಳಿದರೆ ಹುಚ್ಚು ಅನ್ನುವ ಹಾಗೇ ಆಗುತ್ತೆ. ಆ ಶಾಸ್ತ್ರಿ ಒಬ್ಬ ಇದ್ದು ಬಿಟ್ಟರೆ ಅವನಿಗೆ ಹೆಂಡತಿ ಮಕ್ಕಳು ಸಹಿತ ಬೇಕಿಲ್ಲ. ಏನು ಮಾಡಬೇಕಾದರೂ ಅವನ್ನ ಕೇಳದೆ ಮಾಡುವುದಿಲ್ಲ ಅವನು ಆಡಿದ ಮಾತು ವೇದವಾಕ್ಯ. ಶಾಸ್ತ್ರಿಗೆ ಅಣ್ಣನ ಸ್ವಭಾವ ಗೊತ್ತು. ಮಹಾ ವೈರಾಗ್ಯದವನ ಹಾಗೆ ವೇಷ ಕಟ್ಟಿ ದುಡ್ಡು ಕಸಿದುಕೊಳ್ಳುತಾ ಇದಾನೆ.

ರಾಮು—ಕಸಿದುಕೊಳ್ಳದೆ ಯಾಕೆ ಬಿಡುತಾನೆ, ಕೊಡೋರೊಬ್ಬರು ಇರುವಾಗ!

ಸರಸ್ವತಿ— ಮನೆಯಲ್ಲಿ ಅವನ ಪಾರುಪತ್ಯವೇ ಪಾರುಪತ್ಯ. ಅವನ ಜೊತೆಯಲ್ಲಿರುವ ಹುಡುಗ ಸಹಿತ ಮನೆಯವರ ಮೇಲೆಲ್ಲಾ ಕಾರುಬಾರು ನಡೆಸುತಾನೆ. ಮೊನ್ನೆ ನಾವು ತಲೆ ಬಾಚಿಕೊಂಡು ಜಡೆ ಹೆಣೆದುಕೊಳ್ಳುತಾ ಇದ್ದರೆ ಅಣ್ಣನ ಕೈಲಿ ಹೇಳಿದ, ಸದಾ ಬೈತಲೆ ತಿದ್ದಿಕೊಳ್ಳುತಾ ಕೂತಿರುತಾರೆ ಅಂತ! ನಮ್ಮ ಅಲಂಕಾರವೆಲ್ಲಾ ನರಕಕ್ಕೆ ದಾರಿಯಂತೆ!

(ಶಾರದೆ ವಾಪಸು ಬರುವಳು)

ಶಾರದೆ—(ಸರಸ್ವತಿಗೆ) ನೀನೂ ರಾಮುವೂ ನನ್ನ ಜೊತೆಯಲ್ಲಿ ಬರಲಿಲ್ಲ. ಬಂದಿದ್ದರೆ ಇನ್ನಷ್ಟು ಆಶೀರ್ವಾದ ಆಗುತ್ತಿತ್ತು.

ರಾಮು—(ಸ್ವಲ್ಪ ನಗುತ್ತಾ) ಈಗ ಆದದ್ದೇ ಸಾಕಾಗಿದೆ ಚಿಕ್ಕಮ್ಮ!

ಶಾರದೆ—ನಿಮ್ಮ ಅಣ್ಣ ಬಂದರು ರಾಮು, ರೈಲಿನಿಂದ. ಅವರೂ ಸಮಾಧಾನ ಹೇಳಿದರೂ ಅತ್ತೆಮ್ಮ ಕೇಳಲಿಲ್ಲ.

ರಾಮು—ಎಲ್ಲಿ ಹೋಗುತಾಳೆ ಚಿಕ್ಕಮ್ಮ? ಮತ್ತೆ ಬಂದೇ ಬರುತಾಳೆ.

ಶಾರದೆ— ಹುಂ..... ನಾನು ಇನ್ನು ಹೋಗಿ ಒಲೆ ಹತ್ತಿಸಿ ಕಾಫಿಗೆ ಇಡು ತೇನೆ; ಅವರು ರೈಲಿನಿಂದ ಬಂದಿದಾರೆ.

(ಶಾರದೆ ಒಳಕ್ಕೆ ಹೋಗುವಳು)

ರಾಮು—ಕಿಟ್ಟು, ಹಾಗೇ ಅಣ್ಣನ ಕೈಲಿ ಮಾತಾಡುವಾಗ ಲಲಿತನ ಮದುವೆಯ ಮಾತೆತ್ತು ನೋಡೋಣ. ಅನಂತುವಿಗೇ ಕೊಡಬೇಕು ಅಂತ ಅಣ್ಣ ಅವನ್ನ ಮನೆಯಲ್ಲೇ ಇಟ್ಟುಕೊಂಡು ಸಾಕಿದ. ಈ ಗೇನೋ ಮನಸ್ಸು ಬದಲಾಯಿಸಿರುವ ಹಾಗೆ ಕಾಣುತ್ತೆ.

(ಕೈಯಲ್ಲಿ ವೃತ್ತಪತ್ರಿಕೆಯೊಂದನ್ನು ಹಿಡಿದುಕೊಂಡು ಶಂಕರಪ್ಪ ಪ್ರವೇಶಿಸು ತ್ತಾನೆ. ಅವನಿಗೆ ನಲವತ್ತೈದು ನಲವತ್ತಾರು ವರ್ಷ. ಸ್ವಲ್ಪ ಗಾತ್ರವಾದ ಆಳು; ಶ್ಯಾಮಲ ವರ್ಣ; ಮೀಸೆ ಬಿಟ್ಟಿದಾನೆ. ಟ್ವೀಡ್ ಬಟ್ಟೆಯ ಅಂಗಿಹಾಕಿ, ಕೊಂಡು ಮೇಲುಕೋಟೆಯ ಪಂಚೆಯನ್ನುಟ್ಟಿದಾನೆ. ತಲೆಗೆ ಸರಿಗೆಯ ರುಮಾಲು.

ಅವನ ಹಿಂದೆಯೇ ಗಾಡಿಯ ಆಳು ಒಂದು ಟ್ರಂಕು, ಹಾಸಿಗೆ, ಬುಟ್ಟಿ ಇವುಗಳನ್ನು ತಂದಿರಿಸಿ ತನ್ನ ಬಾಡಿಗೆ ತೆಗೆದುಕೊಂಡು ಹೊರಟುಹೋಗುತ್ತಾನೆ.)

ಕೃಷ್ಣಮೂರ್ತಿ—ಏನು ಭಾವ, ಬೆಂಗಳೂರಿಗೆ ಹೋಗಿದ್ದ ಕೆಲಸವಾಯಿತೆ?

ಶಂಕರಪ್ಪ—(ರುಮಾಲನ್ನು ತೆಗೆದು ಬಟ್ಟೆಯ ನಿಲುವಿನ ಮೇಲೆ ಇಡುತ್ತಾ) ಏನೋ ಆದಹಾಗಾಯಿತಪ್ಪ, ಒಂದಿಷ್ಟು ಜವಳಿ ತಗೊಂಡು ಬಂದೆ. ರಾಮು, ಆ ಬುಟ್ಟಿ ತಗೊಂಡು ಹೋಗಿ ಒಳಗೆ ಇಡೊ. (ರಾಮು ಬುಟ್ಟಿಯನ್ನು ತೆಗೆದುಕೊಂಡು ಒಳಕ್ಕೆ ಹೋಗುತ್ತಾನೆ) ಮನೆಯ ಕಡೆ ಎಲ್ಲಾ ಹುಷಾರು ತಾನೆ ಸರಸು? (ಎನ್ನುತ್ತಾ ಒಂದು ಕುರ್ಚಿಯನ್ನು ಎಳೆದುಕೊಂಡು ಅಂಗಿಯನ್ನು ತೆಗೆದು ಅದರ ಬೆನ್ನಿಗೆ ತಗುಲುಹಾಕಿ, ವೃತ್ತ ಪತ್ರಿಕೆಯಿಂದ ಗಾಳಿ ಹಾಕಿಕೊಳ್ಳುತ್ತಾ ಕುಳಿತುಕೊಳ್ಳುವನು.)

ಸರಸ್ವತಿ—ಚಿಕ್ಕಮ್ಮನಿಗೆ ಮೊನ್ನೆ ಬೆಳಗ್ಗೆ ಬಂದ ಜ್ವರ ರಾತ್ರಿಯ ತನಕ ಆರಲಿಲ್ಲ ಅಣ್ಣ. ತಲೆ ಸಿಡಿದುಹೋಗುವ ಹಾಗೆ ನೋವು. ಅವ ತ್ತೆಲ್ಲಾ ಹಾಸಿಗೆ ಬಿಟ್ಟು ಏಳಲೇ ಇಲ್ಲ.

ಶಂಕರಪ್ಪ—ಸುಬ್ಬಾಶಾಸ್ತ್ರಿ ಹುಷಾರಾಗಿದಾನೆಯೇನೆ?

ಸರಸ್ವತಿ—ಅವರಿಗೇನು ಬಂದಿರುವುದು! ಗೂಳಿಯ ಹಾಗೆ ಓಡಾಡಿಕೊಂಡಿ ದಾರೆ.

ಶಂಕರಪ್ಪ—ಪಾಪ, ಈಚೆಗೆ ಆತನಿಗೆ ವ್ಯಾಪಾರದಲ್ಲಿ ಲವಲವಿಕೆಯೇ ಇಲ್ಲ.

ಸರಸ್ವತಿ—ಅವತ್ತೆಲ್ಲಾ ಚಿಕ್ಕಮ್ಮನಿಗೆ ಒಂದು ತೊಟ್ಟು ಗಂಜಿ ಸಹಿತ ಹೊಟ್ಟೆಗೆ ಹೋಗಲಿಲ್ಲ ಅಣ್ಣ.

ಶಂಕರಪ್ಪ—ಶಾಸ್ತ್ರಿಗೆ ಹೊತ್ತಿಗೆ ಗೊತ್ತಿಗೆ ಅಡಿಗೆ ಮಾಡಿ ಬಡಿಸುತಾ ಇದ್ದಿರೋ ಇಲ್ಲವೋ? ಸೇರಿಸಿಕೊಂಡು ಸ್ವಲ್ಪ ಊಟಮಾಡುತಾ ಇದ್ದನೋ?..

ಸರಸ್ವತಿ—ನಿತ್ಯ ಬಿಟ್ಟ ರಸಕವಳ ಬಿದ್ದರೆ ಊಟಮಾಡದೆ ಅವರಿಗೇನು! ಸಾರು, ಹುಳಿ, ಎಲ್ಲಾದರಲ್ಲೂ ಎರಡೆರಡು ಸಲ ಕಲಸಿಕೊಂಡು ಊಟ ಮಾಡುತಾ ಇದ್ದರು.

ಶಕಂರಪ್ಪ—ಪಾಪ, ಈಚೆಗೆ ಆತನಿಗೆ ಊಟದಲ್ಲಿ ರುಚಿಯೇ ಇಲ್ಲ.

ಸರಸ್ವತಿ—ಚಿಕ್ಕಮ್ಮ ಅವತ್ತು ರಾತ್ರಿಯೆಲ್ಲಾ ಕಣ್ಣೇ ಮುಚ್ಚಲಿಲ್ಲ; ನರಳುತ್ತಲೇ ಇದ್ದಳು. ನಾನು ಲಲಿತ ಇಬ್ಬರೂ ಎದ್ದು ಕೂತಿರಬೇಕಾಯಿತು.

ಶಕಂರಪ್ಪ—ಶಾಸ್ತ್ರಿಗೆ ಚೆನ್ನಾಗಿ ನಿದ್ರೆಗಿದ್ರೆ ಬರುತಿತ್ತೋ ಇಲ್ಲವೊ? ಇಲ್ಲ ಈ ಮನೆಯ ಗಲಾಟೆಯಲ್ಲಿ....

ಸರಸ್ವತಿ—ಕೈ ತೊಳೆಯುವಾಗಲೇ ಕಣ್ಣು ಎಳೆದುಕೊಂಡು ಹೋಗುತ್ತೆ ಅಂತ ಇದ್ದರು. ಹಾಸಿಕೊಂಡು ಮಲಗುವುದೇ ತಡ, ಮೂರು ಮನೆಗೆ ಕೇಳುವ ಹಾಗೆ ಗೊರಕೆ ಹಾಕುತಿದ್ದರು. ಬೆಳಗ್ಗೆ ನಮ್ಮ ಕಸ ಮುಸರೆ ಎಲ್ಲಾ ಆದ ಮೇಲೇ ಅವರಿಗೆ ಎಚ್ಚರ.

ಶಕಂರಪ್ಪ—ಆಯಾಸಪಟ್ಟಿರುತ್ತಾನೆ ಪಾಪ.

ಸರಸ್ವತಿ—ಚಿಕ್ಕಮ್ಮನಿಗೆ ಆಮೇಲೆ ನೊರೆಹಾಲು ಪಟ್ಟುಹಾಕಿ, ಕಣ್ಣಿಗೆ ಅಂಜನ ಹಚ್ಚಿದೆವು. ಬೆಳಗಿನ ಜಾವದ ಹೊತ್ತಿಗೆ ಸ್ವಲ್ಪ ಮತ್ತು ಬಂದಹಾಗಿತ್ತು.

ಶಕಂರಪ್ಪ—ಶಾಸ್ತ್ರಿ.....

ಸರಸ್ವತಿ—ಮನೆಯಲ್ಲಿ ಯಾರಿದ್ದರೇನು ಹೋದರೇನು! ಶಾಸ್ತ್ರಿ! ಶಾಸ್ತ್ರಿ! ಬೆಳಗ್ಗೆ ಎದ್ದು ಕಾಫಿ ತಿಂಡಿ ಭರ್ತಿಮಾಡಿಕೊಂಡು ಹೊರಟರು, ನಿಮ್ಮ ಶಾಸ್ತ್ರಿಗಳು.

ಶಕಂರಪ್ಪ—ಪಾಪ, ಬೆಳಗ್ಗೆ ಏನಾದರೂ ಹೊಟ್ಟೆಗೆ ಆಧಾರವಿಲ್ಲದೆ ಇದ್ದರೆ ತಡೆಯಲಾರ ಕಣೆ.

ಸರಸ್ವತಿ—ಚಿಕ್ಕಮ್ಮನಿಗೆ ಹೋಗಿ ಹೇಳುತೇನೆ: ಅಣ್ಣ ನಿನ್ನ ಬಾಯಲಿ ವಿಷಯ ಕೇಳಿ ಭೂಮಿಗೆ ಇಳಿದು ಹೋಗಿದಾನೆ ಅಂತ!

(ಸರಸ್ವತಿ ಮನೆಯೊಳಕ್ಕೆ ಹೋಗುವಳು)

ಕೃಷ್ಣಮೂರ್ತಿ—ಏನು ಭಾವ, ನಿನ್ನ ಹಾಸ್ಯ ಮಾಡುತಾಳೆ ಸರಸಮ್ಮ. ಇಲ್ಲದೆ ಇದ್ದರೂ ಇಂಥ ಕಥೆ ನಾನೆಲ್ಲೂ ಕೇಳಿರಲಿಲ್ಲವಪ್ಪ. ಆ ಸುಬ್ಬಾಶಾಸ್ತ್ರಿಯ ಹೆಸರೆತ್ತಿದರೆ ಸಾಕು, ನಿನಗೆ ಪ್ರಪಂಚವೇ ಮರೆತುಹೋಗುತ್ತಲ್ಲ! ಹೊಟ್ಟೆಗೆ ಹಿಟ್ಟಿಲ್ಲದೆ ಅಲೆಯುತಾ ಇದ್ದವನಿಗೆ ಮನೆಯವರಿಗಿಂತ ಹೆಚ್ಚಾಗಿ ಆದರಣೆ ಮಾಡುವುದೂ ಹೋಗಲಿ ಅಂದರೆ, ಅವನಿಗೆ ........

ಶಂಕರಪ್ಪ—ಒಬ್ಬರ ವಿಷಯ ತಿಳಿಯದೆ ಹಾಗೆಲ್ಲಾ ಮಾತಾಡಬಾರದು ಕಿಟ್ಟು. ಆತ ಎಂಥಾ ಜ್ಞಾನಿ ಅನ್ನುವುದು ನೀನೇನುಬಲ್ಲೆ!

ಕೃಷ್ಣಮೂರ್ತಿ—ಆಗಲಿ, ನಿನ್ನ ಮಾತೇ ನಿಜ ಅನ್ನು. ನನಗೆ ಅವನ ಸ್ವಭಾವ ಗೊತ್ತಿಲ್ಲ ಅಂತಲೇ ಇಟ್ಟುಕೊ. ಆದರೂ....

ಶಂಕರಪ್ಪ—ನಿನಗೆ ಆತನ ಸ್ವಭಾವ ಗೊತ್ತಿದ್ದರೆ ನೀನೆಂದಿಗೂ ಹೀಗೆ ಮಾತಾಡುತಾ ಇರಲಿಲ್ಲ. ಆತ ಎಂಥ ಮನುಷ್ಯ ಅಂತಿಯೆ?.... ಇದು, ಎಂಥ ಇದು ಅಂದರೆ . . . ಆ . . ಅಂಥ ಮನುಷ್ಯ! ಬಾಯಲ್ಲಿ ವೇದಾಂತ ಹೇಳುವುದಕ್ಕೇನು ಕಿಟ್ಟು, ಎಲ್ಲರೂ ಹೇಳುತಾರೆ. ಹೇಳುವುದನ್ನೆಲ್ಲಾ ನಮ್ಮ ಶಾಸ್ತ್ರಿಯ ಹಾಗೆ ಕಾರ್ಯತಃ ನಡೆಸುವುದು ಕಷ್ಟ. ಆಹ, ಅದೇನು ಮನಶ್ಶಾಂತಿ! ಅವನು ಈ ಪ್ರಪಂಚದ ಹವ್ಯಾಸ ಒಂದೂ ಮನಸ್ಸಿಗೆ ಹತ್ತಿಸಿಕೊಳ್ಳುವುದಿಲ್ಲ. ವೈರಾಗ್ಯ ಅಂದರೆ ಅದು ನೋಡು! ಆತ ನಮ್ಮ ಮನೆಗೆ ಬಂದ ಮೇಲೆ ನಾನು ಎಷ್ಟೋ ಮಟ್ಟಿಗೆ ಮನಸ್ಸನ್ನು ತಹಬಂದಿಗೆ ತಂದಿದೇನೆ! ನೋಡು ಕಿಟ್ಟು, ನಾವೆಲ್ಲಾ ಈ ಸಂಸಾರ ಅನ್ನುವ ಬಲೆಗೆ ಸಿಕ್ಕಿಹಾಕಿಕೊಂಡು ನರಳುತಾ ಇದೇವೆ; ಅಜ್ಞಾನಾಂಧಕಾರದಲ್ಲಿ ಸಿಕ್ಕಿ ದಾರಿ ಕಾಣದೆ ತೊಳಲುತಾ ಇದೇವೆ. ಸ್ನೇಹಿತರು, ನಂಟರಿಷ್ಟರು, ಅಣ್ಣತಮ್ಮಂದಿರು, ಹೆಂಡತಿಮಕ್ಕಳು—ಈ ಹಂಬಲೆಲ್ಲಾ ಏನು? ಮಾಯೆ! ಬರಿಯ ಮಾಯೆ! ಮುಂದೆ ಯಮಧರ್ಮ ಪಾಶ ಹಾಕಿ ಎಳೆದುಕೊಂಡು ಹೋಗುತಾನಲ್ಲಾ, ಆವಾಗ ಇವರೆಲ್ಲಾ ಜೊತೆಯಲ್ಲಿ ಬರುತಾರೆಯೆ ಕಿಟ್ಟು? ಕೈಹಿಡಿದ ಹೆಂಡತಿ ಜೊತೆಗೆ ಬರುತಾಳೇನೋ? ಸುಬ್ಬಾ

ಶಾಸ್ತ್ರಿಯ ಸಹವಾಸ ಸಿಕ್ಕಿದ ಮೇಲೆ ಇದೆಲ್ಲಾ ಸ್ವಲ್ಪ ಸ್ವಲ್ಪ ಮನಸ್ಸಿಗೆ ತೋರುತಾ ಇದೆ. ಈಗ ನನ್ನ ಮನಸ್ಸು ಎಷ್ಟು ಹಿಡಿತಕ್ಕೆ ಬಂದಿದೆ ಅಂತೀಯ? ಈ ಘಳಿಗೆ ನನ್ನ ಕಣ್ಣೆದುರಿಗೆ ಹೆಂಡತಿ ಮಕ್ಕಳು ಎಲ್ಲಾ ಸತ್ತು ಬೂದಿಯಾದರೂ ಕೂಡ ಏನೂ ಕಳವಳವಿಲ್ಲದೆ ಇರಬಲ್ಲೆ.

ಕೃಷ್ಣಮೂರ್ತಿ—ಹಾಗಂತ ಹೇಳಪ್ಪ, ನಿನ್ನ ಹೆಂಡತಿ ಮಕ್ಕಳಿಗೆ. ಕೇಳಿ ಹೊಟ್ಟೆಗೆ ಹಾಲು ಹುಯ್ಕೊಳ್ಳಲಿ!

ಶಂಕರಪ್ಪ—ಕಿಟ್ಟು. ನನ್ನ ಹಾಗೆ ಆತನ ಜೊತೆಯಲ್ಲಿ ಓಡಾಡಿದ್ದರೆ ನಿನಗೂ ಅವನಲ್ಲಿ ಭಕ್ತಿಯಿರುತಾ ಇತ್ತು. ಅವನು ರುದ್ರಾಕ್ಷಿಸರ ಹಾಕಿಕೊಂಡು, ವಿಭೂತಿ ಇಟ್ಟುಕೊಂಡು ಜಪಕ್ಕೆ ಕೂತಿದ್ದರೆ ಮುಖದಲ್ಲಿ ಅದೇನು ತೇಜಸ್ಸು! ಸಾಕ್ಷಾತ್ ಪರಮೇಶ್ವರ ಅನ್ನುವ ಹಾಗೇ ಇರುತ್ತೆ. ಅವನ ಜೊತೆಯಲ್ಲಿ ಹುಡುಗ ಇದಾನಲ್ಲ, ಶಿವು—ಹುಡುಗನಾದರೂ ಅವನ ಆಚಾರ ಮಡಿ ಹುಡಿ ಎಷ್ಟು ಅಂತೀಯ—ಅವನು ಹೇಳಿದ: ಶಾಸ್ತ್ರಿಗಳು ಬಡವರು, ಏನೂ ಆಧಾರವಿಲ್ಲ ಅಂತ. ಅವರ ಆಸ್ತಿಯೆಲ್ಲಾ ದಾಯಾದಿ ವ್ಯಾಜ್ಯದಲ್ಲಿದೆಯಂತೆ. ಆತನೂ ದೊಡ್ಡ ಮನೆತನಕ್ಕೆ ಸೇರಿದವನು ಕಣೊ. ಅವನಪ್ಪ ತುಂಬ ಅನುಕೂಲಸ್ಥಿತಿಯಲ್ಲಿದ್ದರು. ಸದ್ಯದಲ್ಲಿ ಏನೋ ಪಾಪ, ಬಡತನದಲ್ಲಿದಾನೆ. ನಾನು ಒಂದು ದಿನ ಒಂದು ರೂಪಾಯಿ ಇಟ್ಟು ಎಲೆಅಡಿಕೆ ಕೊಟ್ಟೆ. ಇದನ್ನ ಕಟ್ಟಿಕೊಂಡು ನಾನೇನು ಮಾಡಲಿ ಅಂದುಬಿಟ್ಟು ಯಾವನೋ ತಿರುಕನ ಕೈಲಿ ಹಾಕಿಬಿಟ್ಟ! ಏನೋ ಭಗವಂತನ ಪ್ರೇರಣೆಯಾಯಿತು; ಬಂದು ಮನೆಯಲ್ಲೇ ಇದ್ದು ಬಿಡಿ ಅಂದೆ. ಆತನೂ ದೊಡ್ಡ ಮನಸ್ಸು ಮಾಡಿ ಬಂದ. ಈಗ ಮನೆಯಲ್ಲಿ ನೋಡು, ನಾನೇ ಆಗಲಿ, ಅವಳೇ ಆಗಲಿ, ಯಾರಲ್ಲಿ ಏನು ತಪ್ಪಿದ್ದರೂ ನಿರ್ದಾಕ್ಷಿಣ್ಯವಾಗಿ ಹೇಳಿಬಿಡುತಾನೆ. ಮೊನ್ನೆ ಅವಳಿಗೆ ಹೇಳಿದ: ಹಾಗೆಲ್ಲಾ ನೆರಿ ಚಿಮುಕಿಸಿಕೊಂಡು ಬೀದಿ ಬಾಗಿಲಿನಲ್ಲಿ ನಿಂತಿರಬಾರದು ಅಂತ. ನಮ್ಮ ಮನೆಯವರ ನಡತೆ ಅಷ್ಟರಮಟ್ಟಿಗೆ ಯಾರು ನೋಡಿಕೊಳ್ಳುತಾರೆ ಕಿಟ್ಟು! ಅವನು ತನ್ನ ವಿಷಯದಲ್ಲಿ ತಾನೆ ಎಷ್ಟು ಕಟ್ಟುನಿಟ್ಟು ಅಂತೀಯೆ! ಮೊನ್ನೆ ಜಪಕ್ಕೆ ಕೂತುಕೊಳ್ಳುವಾಗ ಕಾಣದೆ ಒಂದು ಇರುವೆ ಹೊಸಕಿ ಹಾಕಿಬಿಟ್ಟನಂತೆ;

ಪ್ರಾಣಿಹತ್ಯೆ ಮಾಡಿದೆನಲ್ಲಾ ಅಂತ ಇನ್ನೂ ಸಂಕಟ ಪಟ್ಕೊಳ್ತಾ ಇದಾನೆ.

ಕೃಷ್ಣಮೂರ್ತಿ—ನಿನಗೇನು ಹುಚ್ಚುಗಿಚ್ಚು ಹಿಡಿಯಿತೋ ಭಾವ? ಇಲ್ಲ ನನ್ನ ಲೇವಡಿ ಮಾಡಬೇಕು ಅಂತ ಹೀಗೆಲ್ಲಾ ಮಾತಾಡುತೀಯೋ? ಈ ಬೂಟಾಟಿಕೆಯನ್ನೆಲ್ಲಾ ಯಾರಾದರೂ....

ಶಂಕರಪ್ಪ—ಕಿಟ್ಟು, ನಿನಗೆ ದೊಡ್ಡವರು ಚಿಕ್ಕವರು ಅನ್ನುವ ಮರ್ಯಾದೆಯೇ ಇದ್ದ ಹಾಗೆ ಕಾಣುವುದಿಲ್ಲ. ಸುಬ್ಬಾಶಾಸ್ತ್ರಿ ಅಂದರೆ ಗುರುಗಳ ಸಮಾನ ಕಣೊ. ಹಾಗೆಲ್ಲಾ ಅವನ್ನ ನಿಂದೆ ಮಾಡಬಾರದು. ಗುರುನಿಂದೆಗಿಂತ ದೊಡ್ಡ ಪಾಪ ಇನ್ನಿಲ್ಲ.

ಕೃಷ್ಣಮೂರ್ತಿ—ಈ ಕಗ್ಗವನ್ನೆಲ್ಲಾ ಕೇಳಿದೇನೆ ಬಿಡು ಭಾವ. ನೀನು ಕುರುಡ ಅಂದರೆ ಲೋಕಕ್ಕೇ ಕುರುಡೇ? ಇದ್ದದ್ದು ಇದ್ದ ಹಾಗೇ ಹೇಳಿದರೆ ದೊಡ್ಡ ಅಪರಾಧವಾಗಿ ಹೋಯಿತು. ಪಟ್ಟೆ ಪಟ್ಟೆ ವಿಭೂತಿ ಬಳಿದು ಕೊಂಡವರೆಲ್ಲಾ ಶಂಕರಾಚಾರ್ಯರಾಗಿಹೋದರು. ನಿಜವಾಗಿಯೂ ವಿರಕ್ತರಾಗಿರೋರು ಈ ವೇಷವನ್ನೆಲ್ಲಾ ಕಟ್ಕೊಳ್ಳದೇ ಇಲ್ಲ. ಬೂಟಾ ಟಿಕೆಗೂ ವೈರಾಗ್ಯಕ್ಕೂ ವ್ಯತ್ಯಾಸವೇ ಇಲ್ಲವೆ? ನಾಟಕದಲ್ಲಿ ಬಣ್ಣ ಬಳಿದುಕೊಂಡು ಕುಣಿಯೋರೆಲ್ಲಾ ದೊರೆಗಳು ಅಂದಹಾಗಾಯಿತು. ದೇವರು ಬ್ರಾಹ್ಮಣರು ಇವರಲ್ಲಿ ಭಕ್ತಿಯಿರುವುದೇನೋ ಸರಿ. ಆದರೆ ನಿನ್ನ ಭಕ್ತಿ ಯಾಕೋ ಲೋಕಕ್ಕೇ ಅತಿರೇಕವಾಗಿದೆ!

ಶಂಕರಪ್ಪ—ಸರಿ ಬಿಡು. ನೀನೊಬ್ಬ ದೊಡ್ಡಪಂಡಿತ! ನಿನಗೆ ತಿಳಿಯದೇ ಇರುವುದೇನಿದೆ? ನೀನು ಬೃಹಸ್ಪತಿ! ಬಾಕಿಯವರ ತಲೆಯಲ್ಲೆಲ್ಲಾ ಮಣ್ಣುಮುದ್ದೆ ತುಂಬಿದೆ. ಸರಿಯೆ?

ಕೃಷ್ಣಮೂರ್ತಿ—ಇಲ್ಲ ಭಾವ, ನಾನೇನೂ ಎಲ್ಲಾದರಲ್ಲೂ ಪ್ರವೀಣ ಅಂತ ಹೇಳಿಕೊಳ್ಳಲಿಲ್ಲ. ಆದರೆ ಬೆಳ್ಳಗಿರುವುದೆಲ್ಲಾ ಹಾಲಲ್ಲ ಅಂತ ತಿಳಿದು ಕೊಳ್ಳುವಷ್ಟು ಬುದ್ಧಿ ಕೊಟ್ಟಿದಾನೆ, ದೇವರು. ನಿಜವಾಗಿಯೂ ಪ್ರಪಂಚದ ಹಂಬಲು ಬಿಟ್ಟು ಬಿಟ್ಟು ದೇವರಲ್ಲೇ ಮನಸ್ಸು ನಿಲ್ಲಿಸುವಂಥ ಮಹಾನುಭಾವ ಸಿಕ್ಕಿದರೆ ಕಾಲು ಮುಟ್ಟಿ ನಮಸ್ಕಾರ ಮಾಡೋಣ. ಆದರೆ ವೇಷ ಕಟ್ಟಿಕೊಂಡು ಅಲೆಯುತಾರಲ್ಲ ಈ ಬುಡಬುಡಕೆ ದಾಸಯ್ಯಗಳು, ಇವರಂಥ ಪಾಪಿಗಳು ಯಾರೂ ಇಲ್ಲ. (ಶಂಕರಪ್ಪ

ಕುರ್ಚಿಯನ್ನು ಬಿಟ್ಟು ಎದ್ದು ಕೈಕಟ್ಟಿಕೊಂಡು ಕೃಷ್ಣಮೂರ್ತಿಯನ್ನು ದುರುದುರನೆ ನೋಡುತ್ತಾ ನಿಲ್ಲುತ್ತಾನೆ.) ಇವರಿಗೇ ಬೇರೆ ನರಕ ಸೃಷ್ಟಿಯಾಗಬೇಕು. ವೈರಾಗ್ಯ ಅನ್ನುವುದೇನು ಹಾವಾಡಿಗರ ಆಟ ಕೆಟ್ಟುಹೋಯಿತೆ? ರುಚಿ ರುಚಿ ಅಡಿಗೆ ಬೇಕು, ಪಟ್ಟೆಮಂಚ ಬೇಕು, ವೇದಾಂತ ಹೇಳುವುದು ನೋಡಿದರೆ ಎಲ್ಲೂ ಹಿಡಿಯದು!

ಶಂಕರಪ್ಪ—(ಬಹಳ ಬಿಗಿಯ ಮೇಲೆ ಮಾತಾಡುತ್ತಾ) ಮುಗಿಯಿತೋ ಕಿಟ್ಟು! ಮುಗಿಯಿತೋ ನಿನ್ನ ಉಪನ್ಯಾಸ?

ಕೃಷ್ಣಮೂರ್ತಿ—ಹೂ, ಮುಗಿಯಿತು. ನಿನ್ನ ಉಪನ್ಯಾಸಕ್ಕಿಂತ ಏನೂ ದೊಡ್ಡದಲ್ಲ.

ಶಂಕರಪ್ಪ—(ಟವಲು ಹುಡುಕುವುದಕ್ಕೆ ಬಟ್ಟೆಯ ನಿಲುವಿನ ಬಳಿಗೆ ಹೋಗುತ್ತಾ) ಹಾಗಾದರೆ ನಾನು ಸ್ನಾನಕ್ಕೆ ಹೋಗುತ್ತೇನೆ.

ಕೃಷ್ಣಮೂರ್ತಿ—ಒಂದು ಮಾತು. ಅನಂತನ್ನ ಅಳಿಯನ್ನ ಮಾಡಿಕೊಳ್ಳಬೇಕು ಅಂಥ ಇದ್ದೆಯಲ್ಲ, ಅದು ...

ಶಂಕರಪ್ಪ—(ನಿಲುವಿನ ಬಳಿಯಲ್ಲಿಯೇ ನಿಂತು ಹಿಂದಕ್ಕೆ ತಿರುಗಿ) ಹೌದು.

ಕೃಷ್ಣಮೂರ್ತಿ—ಲಗ್ನ ಗೊತ್ತಾಗಿತ್ತು ಅಲ್ಲವೆ?

ಶಂಕರಪ್ಪ—(ಮತ್ತೆ ನಿಲುವಿನ ಕಡೆಗೆ ತಿರುಗಿ ಟವಲನ್ನು ಹುಡುಕುತ್ತಾ) ಹೂಂ.

ಕೃಷ್ಣಮೂರ್ತಿ—ಈಗೇನೋ ನಿಂತುಹೋಗುವ ಹಾಗಿದೆ ಅಂತ ಕೇಳಿದೆ?

ಶಂಕರಪ್ಪ—(ಕೃಷ್ಣಮೂರ್ತಿಯ ಕಡೆಗೆ ತಿರುಗದೆಯೇ) ಕಂಕಣ ಒದಗಿ ಬಂದಿಲ್ಲವೋ ಏನೋ. ನಿಂತುಹೋದರೂ ಹೋಗಬಹುದು.

ಕೃಷ್ಣಮೂರ್ತಿ—ಬೇರೆ ವರ ಏನಾದರೂ ನಿರೀಕ್ಷೆಯಲ್ಲಿಟ್ಟುಕೊಂಡಿದೀಯೋ ಅಂತ?

ಶಂಕರಪ್ಪ—ಇರಬಹುದು ... ಸರಸು, ಟವಲು ಎಲ್ಲಿ ನೋಡಮ್ಮ. (ಸರಸ್ವತಿ ಒಳಗಿನಿಂದ ಚೆನ್ನಾಗಿ ಮಡಿಸಿರುವ ಎರಡು ಟವಲುಗಳನ್ನು ತಂದು ನಿಲುವಿನ ಮೇಲೆ ಹಾಕಿ ಹೋಗುವಳು. ಶಂಕರಪ್ಪನು ಒಂದು ಟವಲನ್ನು ತೆಗೆದು ಹೆಗಲ ಮೇಲೆ ಹಾಕಿಕೊಂಡು ಕೃಷ್ಣಮೂರ್ತಿಯ ಕಡೆಗೆ ತಿರುಗುತ್ತಾನೆ. ಕೃಷ್ಣಮೂರ್ತಿ ಮಾತಾಡುತ್ತಲೇ ಇರುವನು.)

ಕೃಷ್ಣಮೂರ್ತಿ—ಈ ಪಕ್ಷಕ್ಕೆ ಲಲಿತನ್ನ ಅವನಿಗೇ ಕೊಡುತೇನೆ ಅಂತ ಹತ್ತು ಹನ್ನೆರಡು ವರ್ಷದಿಂದ ಮನೆಯಲ್ಲಿಟ್ಟುಕೊಂಡು ಸಾಕಿದ್ದೇಕೆ? ಮಾತಿಗೆ ತಪ್ಪಿದ ಹಾಗಾಗುವುದಿಲ್ಲವೆ ಭಾವ?

ಶಂಕರಪ್ಪ—ಮಾತಿಗೆ ತಪ್ಪುವುದು ಅಂತ ಅಲ್ಲ ಅದು ...

ಕೃಷ್ಣಮೂರ್ತಿ—ಮದುವೆ ನಿಲ್ಲಿಸುವುದಕ್ಕೆ ಏನೂ ಕಾರಣವಿದ್ದ ಹಾಗೆ ತೋರಲಿಲ್ಲ

ಶಂಕರಪ್ಪ—ನಿನಗೆ ತೋರದೆ ಇರಬಹುದು.

ಕೃಷ್ಣಮೂರ್ತಿ—ಮೊನ್ನೆ ಅವರ ಸೋದರಮಾವ ಬಂದಿದ್ದರು, ಅನಂತನಿಗೆ ಲಲಿತನ್ನ ಕೊಡದೆ ಇರುವುದು ನಿಶ್ಚಯವಾದರೆ ತಮ್ಮ ಮಗಳಗೆ ಜಾತಕ ಹೊಂದುತ್ತೆಯೆ ನೋಡೋಣ ಅಂತ. ನಿನ್ನ ಕೈಲಿ ಈ ಪ್ರಸ್ತಾಪ ಮಾಡು ಅಂದರು.

ಶಂಕರಪ್ಪ—ಹೂಂ.

ಕೃಷ್ಣಮೂರ್ತಿ—ಅವರಿಗೆ ಉತ್ತರ ಏನು ಹೇಳಲಿ?

ಶಂಕರಪ್ಪ—ಏನು ತೋರುತ್ತೋ ಅದು ಹೇಳು.

ಕೃಷ್ಣಮೂರ್ತಿ—ನಿನ್ನ ಮನಸ್ಸಿನಲ್ಲಿ ಅದೇನಿದೆ ಸ್ಪಷ್ಟವಾಗಿ ಹೇಳಬಾರದೆ?

ಶಂಕರಪ್ಪ—ದೇವರ ಇಚ್ಛೆಯಿದ್ದ ಹಾಗಾಗಲಿ ಅಂತ.

ಕೃಷ್ಣಮೂರ್ತಿ—ಖಂಡಿತ ಒಂದು ಮಾತು ಹೇಳಿಬಿಡು ಭಾವ. ಹಿಂದಿನ ಸಂಕಲ್ಪ ನಡೆಸುತೀಯೋ ಇಲ್ಲವೋ?

ಶಂಕರಪ್ಪ—ಹೊತ್ತಾಯಿತು, ಸ್ನಾನಕ್ಕೆ ಹೋಗಬೇಕು. (ಹೊರಟು ಹೋಗುತ್ತಾನೆ.)

ಪರದೆ

## ಎರಡನೆಯ ದೃಶ್ಯ

[ಅದೇ ಹಜಾರ. ಲಲಿತ ಮೇಜಿನ ಮೇಲೆ ಹರಡಿದ್ದ ವೃತ್ತಪತ್ರಿಕೆಯ ಹಾಳೆಗಳನ್ನು ಜೋಡಿಸಿ ಇಡುತ್ತಿದಾಳೆ. ಶಂಕರಪ್ಪ ಮನೆಯೊಳಗಿನಿಂದ ಬಂದು ಕುರ್ಚಿಯ ಮೇಲೆ ಕುಳಿತುಕೊಳ್ಳುವನು. ಶಾರದೆ ಸಿದ್ಧಪಡಿಸಿದ ಎಲೆ ಅಡಿಕೆಯನ್ನು ಒಂದು ತಟ್ಟೆಯಲ್ಲಿಟ್ಟುಕೊಂಡು ಒಳಗಿನಿಂದ ಬಾಗಿಲಿನ ಬಳಿಗೆ ಬರುತ್ತಾಳೆ.]

ಶಾರದೆ—ಲಲಿತ, ಎಲೆ ಅಡಿಕೆ ತಗೊಂಡುಹೋಗಿ ಕೊಡಮ್ಮ. (ಲಲಿತೆ ತಟ್ಟೆಯನ್ನು ತಂದು ಶಂಕರಪ್ಪನ ಸಮೀಪದಲ್ಲಿ ಇನ್ನೊಂದು ಕುರ್ಚಿಯ ಮೇಲೆ ಇಡುವಳು. ಶಾರದೆ ಹೊರಟುಹೋಗುವಳು.)

ಶಂಕರಪ್ಪ—(ಅಡಿಕೆಯನ್ನು ಹಾಕಿಕೊಂಡು, ಎಲೆಗೆ ಸುಣ್ಣ ಹಚ್ಚುತ್ತಾ) ಏನು ಲಲಿತ, ಹೊರಟೇ ಬಿಟ್ಟೆ?

ಲಲಿತ—ಚಿಕ್ಕಮ್ಮನಿಗೆ ಬಡಿಸಬೇಕು, ಅಣ್ಣ.

ಶಂಕರಪ್ಪ—ಸರಸು ಬಡಿಸುತಾಳೆ, ಬಿಡು. ಕೂತುಕೊ ಬಾ ಲಲಿತ. ನಿನಗೊಂದು ಮಾತು ಹೇಳಬೇಕು.

(ಲಲಿತ ಕುರ್ಚಿಯ ಮೇಲಿದ್ದ ತಟ್ಟೆಯನ್ನು ಕೆಳಗಿರಿಸಿ ಕುಳಿತುಕೊಳ್ಳುವಳು.)

ಶಂಕರಪ್ಪ—ನೋಡಮ್ಮ ಲಲಿತ, ನೀನು ಇದುವರೆಗೂ ಹೇಳಿದ ಹಾಗೆ ಕೇಳಿಕೊಂಡು ಒಳ್ಳೆಯ ಹುಡುಗಿ ಅನ್ನಿಸಿಕೊಂಡಿದೀಯೆ. ನನಗೆ ರಾಮುವಿಗಿಂತ ನಿನ್ನ ಕಂಡರೇ ಬಹಳ ಪ್ರೀತಿ.

ಲಲಿತ—ಹೌದು ಅಣ್ಣ. ನಾನು ಅಂದರೆ ಮೊದಲಿಂದಲೂ ನಿನಗೆ ತುಂಬ ಪ್ರೀತಿ.

ಶಂಕರಪ್ಪ—ನಿಜ. ಅದಕ್ಕೆ ತಕ್ಕ ಹಾಗೆ ನೀನು ನನಗೆ ಸಂತೋಷವಾಗುವ ಹಾಗೆ ನಡೆದುಕೊಳ್ಳಬೇಕು.

ಲಲಿತ—ನಿನಗೆ ವ್ಯಸನವಾಗುವ ಹಾಗೆ ಎಲ್ಲಾದರೂ ನಡೆದುಕೊಂಡೇನೆ ಅಣ್ಣ?

ಶಂಕರಪ್ಪ—(ಬಹಳ ಮೃದು ಧ್ವನಿಯಿಂದ) ಸರಿ. ಈಗ ನಮ್ಮ ಮನೆಯಲ್ಲಿ ಸುಬ್ಬಾಶಾಸ್ತ್ರಿಗಳು ಇದಾರಲ್ಲ. ಅವರು ಬಲು ಒಳ್ಳೆಯವರಲ್ಲವೆ?

ಲಲಿತ—(ಸ್ವಲ್ಪ ಆಶ್ಚರ್ಯದಿಂದ) ಸುಬ್ಬಾಶಾಸ್ತ್ರಿಗಳೆ?

ಶಂಕರಪ್ಪ—(ಸ್ವಲ್ಪ ಕೋಪಗೊಂಡು ಲಲಿತೆಗೆ ಎಚ್ಚರಿಕೆ ಕೊಡುವಂತೆ) ಹೂಂ, ಸ್ವಲ್ಪ ಯೋಚನೆಮಾಡಿ ಹೇಳು. ಸುಮ್ಮನೆ ಮನಸ್ಸಿಗೆ ತೋರಿದ್ದು ಆಡಿಬಿಡಬೇಡ.

ಲಲಿತ—ನೀನು ಏನು ಹೇಳು ಅಂದರೆ ಅದು ಹೇಳುತೇನೆ ಅಣ್ಣ.

(ಸರಸ್ವತಿ ಶಂಕರಪ್ಪನಿಗೆ ಕಾಣದಂತೆ ಮೆಲ್ಲಗೆ ಬಂದು ಅವನ ಹಿಂದೆ ನಿಂತುಕೊಳ್ಳುತ್ತಾಳೆ)

ಶಂಕರಪ್ಪ—(ಮತ್ತೆ ಮೃದು ಧ್ವನಿಯಿಂದ) ಸರಿ. ಮಕ್ಕಳು ಅಂದರೆ ಹಾಗಿರ ಬೇಕು. ಹಾಗಾದರೆ ನೋಡು ಲಲಿತ, ಹೀಗೆ ಹೇಳು : ನನಗೆ ಶಾಸ್ತ್ರಿ ಗಳು ಅಂದರೆ ಬಹಳ ಗೌರವ. ನೀನು ಒಪ್ಪುವುದಾದರೆ ನಾನು ಅವರನ್ನೇ ಮದುವೆಮಾಡಿಕೊಳ್ಳುತೇನೆ ಅಂತ ಹೇಳು.

ಲಲಿತ—ಆ, ಏನು?

ಶಂಕರಪ್ಪ—(ಮತ್ತೆ ಕೋಪಗೊಂಡು) ಯಾಕೇ, ಮಂಕು ಬಡಿದವಳ ಹಾಗಾ ಡುತೀಯೆ?

ಲಲಿತ—ಏನಂದೆ, ನಾನು.....

ಶಂಕರಪ್ಪ—ಕೇಳಲಿಲ್ಲವೇ? ನಿನಗೇನು ಕಿವುಡೆ?

ಲಲಿತ—ಸುಬ್ಬಾಶಾಸ್ತ್ರಿಗಳನ್ನ.....

ಶಂಕರಪ್ಪ—ಹೂಂ, ಸುಬ್ಬಾಶಾಸ್ತ್ರಿಗಳನ್ನ. ನಿನ್ನ ಅವರಿಗೇ ಕೊಟ್ಟು ಮದುವೆ ಮಾಡಬೇಕು ಅಂತ ಇದ್ದೇನೆ. ಪುಣ್ಯವಶಾತ್ ಆತನ ಸಂಬಂಧ ದೊರಕುವ ಹಾಗಿದೆ. ನಾನು.... (ಸರಸ್ವತಿ ಒಂದು ಹೆಜ್ಜೆ ಮುಂದೆ ಬರುತ್ತಾಳೆ. ಶಂಕರಪ್ಪ ಅವಳು ಬಂದಿರುವುದನ್ನು ಕಂಡು ಕೋಪದಿಂದ) ನೀನು ಯಾಕೆ ಬಂದೆಯೋ ಇಲ್ಲಿಗೆ? ಏನು ಮಾತಾಡುತಾರೆ ಕೇಳೋಣ ಅಂತಲೋ? ದುರ್ವಿದ್ಯ. ಹೀಗೆಲ್ಲಾ ಮಾಡಬಾರದು ಸರಸು.

ಸರಸ್ವತಿ—ಇಲ್ಲ ಅಣ್ಣ. ನಾನೇನೂ ನಿಮ್ಮ ಮಾತು ಕೇಳುವುದಕ್ಕೆ ಬರಲಿಲ್ಲ. ಏನೋ ಒಂದು ಸುದ್ದಿ ಕಿವಿಗೆ ಬಿತ್ತು, ಲಲಿತನ್ನ ಶಾಸ್ತ್ರಿಗಳಿಗೆ ಕೊಡು ತಾರಂತೆ ಅಂತ. ಯಾರೋ ಹಾಸ್ಯಕ್ಕೆ ಹರಡಿರಬಹುದು, ನಿನ್ನ ಕೇಳೋಣ ಅಂತ ಬಂದೆ.

ಶಂಕರಪ್ಪ—(ಹುಬ್ಬು ಗಂಟಿಕ್ಕಿಕೊಂಡು) ಹಾಸ್ಯವೇನು ಬಂತು ಅದರಲ್ಲಿ, ಹಾಸ್ಯ? ಏನು ಅಂಥ ನಂಬುವುದಕ್ಕಾಗದೆ ಇರುವುದು?

ಸರಸ್ವತಿ—(ನಗುತ್ತಾ) ನನಗೇನೋ ನೀನೇ ಬಾಯಿಬಿಟ್ಟು ಹೇಳಿದರೂ ನಂಬು ವುದು ಕಷ್ಟ.

ಶಂಕರಪ್ಪ—(ಕೋಪದಿಂದ) ತಾಳು, ನಿಮಗೆಲ್ಲಾ ನಂಬಿಗೆ ಹುಟ್ಟುವ ಹಾಗೆ

ಮಾಡುತೇನೆ.

ಸರಸ್ವತಿ—(ನಗುತ್ತಾ, ಹಾಸ್ಯಧ್ವನಿಯಿಂದ) ಚೆನ್ನಾಗಿದೆ ಲಲಿತ, ಒಳ್ಳೇ ಗಂಡ ಸಿಕ್ಕಿದ ಕಣೆ ನಿನಗೆ! ಒಳ್ಳೇ ವರನ್ನೇ ಹುಡುಕಿದೀಯ ಅಣ್ಣ!

ಶಂಕರಪ್ಪ—ನೋಡತಾ ಇರು. ನಿಜವೋ ಸುಳ್ಳೋ ತಿಳಿಯುತ್ತೆ. ತಮಾಷೆ ಅಂತ ತಿಳಿದುಕೊಂಡೆಯೋ?

ಸರಸ್ವತಿ—(ಶಂಕರಪ್ಪನ ಮಾತನ್ನು ನಂಬದೆ ಇರುವವಳಂತೆ ನಟಿಸಿ, ಪೆಚ್ಚಾಗಿ ಕುಳಿತಿರುವ ಲಲಿತೆಯನ್ನು ಸಮಾಧಾನಪಡಿಸಲು ಹೋಗುತ್ತಾಳೆ.) ತಮಾಷೆಯಲ್ಲದೆ ನಿಜವಾಗಿಯೂ ಅವರಿಗೇ ಕೊಡುತಾರೆ ಅಂದುಕೊಂಡೆ ಯೇನೇ? ಅಯ್ಯೋ ಹುಚ್ಚಿ, ಸುಮ್ಮನಿರು. ಅಣ್ಣ ಏನೋ ಹಾಗಂದ ಅಂತ ನೀನು ಮುಖ ಸಪ್ಪಗೆ ಮಾಡಿಕೊಳ್ಳುವುದೆ?

ಶಂಕರಪ್ಪ—ಬೇಡ, ಸರಸು, ನೀನು.....

ಸರಸ್ವತಿ—(ಇನ್ನೂ ಶಂಕರಪ್ಪನ ಮಾತು ತಮಾಷೆಯೆಂದೇ ಭಾವಿಸುವವಳಂತೆ) ಬಿಡು ಅಣ್ಣ, ಸುಮ್ಮನೆ ಯಾಕೆ ಲಲಿತನ್ನ ಅಳಿಸುತೀಯೆ!

ಶಂಕರಪ್ಪ—ಬೇಡ, ಬೇಡ, ನನಗೆ ಕೋಪ ಬರುತ್ತೆ ನೋಡು ಇನ್ನು!

ಸರಸ್ವತಿ—(ಹಾಸ್ಯವನ್ನು ಬಿಟ್ಟು) ಕೋಪವೇಕೆ ಅಣ್ಣ. ನಿಧಾನವಾಗಿ ಮಾತಾ ಡೋಣ. ಈಗ ಈ ಬೈರಾಗೀನ ಹಿಡಿದುಕೊಂಡು ಬಂದು.....

ಶಂಕರಪ್ಪ—ಇಲ್ಲಿ ನೋಡು ಸರಸು, ನಾನು ಅಷ್ಟು ಹೊತ್ತಿನಿಂದ ಸುಮ್ಮನಿದೇನೆ. ಇನ್ನು ನೀನು ಹೀಗೆ ಹದ್ದು ಮೀರಿ ಮಾತಾಡಿದರೆ ನನಗೆ ಸೈರಿಸುವುದಿಲ್ಲ.

ಸರಸ್ವತಿ—ಹಾಗಾದರೆ ನೀನು ನಿಜವಾಗಿಯೂ ಈ ಲಗ್ನ ಮಾಡಬೇಕು ಅಂತಿ ದೀಯಾ? ಸದಾ ಮೂಗು ಹಿಡಿದುಕೊಂಡು ಕೂತಿರೋನಿಗೆ ಮದುವೆ ಯಾಕೆ? ಇಷ್ಟುದಿನ ಲಲಿತುನ ಗಿಣಿ ಸಾಕಿದ ಹಾಗೆ ಸಾಕಿ ಯಾವನೋ ತಿರುಕನ ಕೈಲಿಟ್ಟು ಬಿಡುವುದೆ? ನೀನು.....

ಶಂಕರಪ್ಪ—ಸಾಕು ಸುಮ್ಮನಿರು, ಸರಸು. ಅವನ ಬಡತನವೇ ಒಂದು ಅಪ ರಾಧವೇ? ಬಡತನ ಸಿರಿತನ ನಮ್ಮ ಯತ್ನವೆ? ಅಥವಾ ಶಾಶ್ವತವೊ? ಇಲ್ಲಿಯ ಐಶ್ವರ್ಯ ಇಲ್ಲದಿದ್ದರೇನು, ಪರಲೋಕಕ್ಕೆ ನಿಧಿ ಕಟ್ಟಿಟ್ಟು ಕೊಂಡಿದಾನೆ ಅವನು! ಅದು ಅಲ್ಲದೆ, ಅವನು ಹೇಳಲಿಲ್ಲವೆ? ಅವನಿಗೆ ಭೂಮಿಕಾಣಿಯೂ ಇದೆ. ಅವರಪ್ಪ ತುಂಬ ಆಸ್ತಿವಂತರು. ಅಣ್ಣ ತಮ್ಮಂದಿರು ಮೋಸಮಾಡಿದಾರೆ; ಕೋರ್ಟಿಗೆ ಹೋದರೆ ಆಸ್ತಿಯೂ

ಬರುತ್ತೆ.

ಸರಸ್ವತಿ—ಅವನು ಹೇಳುತಾನೆ! ಅವನ ಮಾತು ಏನು ನೆಚ್ಚಿಗೆ? ಅದು ಹೇಗಾದರೂ ಇರಲಿ ಅಣ್ಣ. ಅಂಥ ವೈರಾಗ್ಯ ಹೇಳಿಕೊಳ್ಳೋನಿಗೆ ಈ ಹೆಮ್ಮೆ ಯಾಕೆ? ಪ್ರಪಂಚವೇ ನಶ್ವರ, ತಂದೆ ತಾಯಿ ಅನ್ನುವ ವ್ಯಾಮೋಹವೆಲ್ಲಾ ಬರಿಯ ಮಾಯೆ ಅನ್ನೋನಿಗೆ ಅಪ್ಪ ಐಶ್ವರ್ಯವಂತರು ಅಂತ ಜಂಬವೇಕೆ? ಇದುವರೆಗೆ ಎಲ್ಲಾದರೂ ಐವತ್ತು ಸಲ ಹೇಳಿಕೊಂಡಿದಾನೆ ಅದನ್ನ. ಅವನ ಮನೆತನವೂ ಹೋಗಲಿ ಅಣ್ಣ, ಅವನ ಇರಿಕೆಯನ್ನಾದರೂ ನೋಡು! ನಮ್ಮ ಲಲಿತೆಯಂಥ ಚೆಲುವೆಯನ್ನು ಅವನಿಗೆ ಕೊಡುವುದಕ್ಕೆ ಹೇಗೆ ಮನಸ್ಸು ಬರುತ್ತೆ ಅಣ್ಣ? ವರಸಾಮ್ಯವಾಗುತ್ತೆಯೆ, ಮುಂದೆ ಗಂಡ ಹೆಂಡತಿ ಹೊಂದಿಕೊಂಡಿರುತಾರೆಯೆ ಅಂತ ನೋಡಬೇಡವೆ? ಅನಂತನಿಗೇ ಕೊಡಬೇಕು ಅಂತ ಇಬ್ಬರನ್ನೂ ಒಟ್ಟಿಗೆ ಸಾಕಿದೆ; ಹತ್ತು ವರ್ಷದಿಂದಲೂ ಇಬ್ಬರೂ ಒಟ್ಟಿಗೆ ಬೆಳೆದವರು. ಈಗ ಯಾರನ್ನೋ ತಂದು ಕಟ್ಟಿಬಿಟ್ಟರೆ ..

ಶಂಕರಪ್ಪ—ನಿನ್ನ ಕೈಲಿ ಕಲಿತುಕೊಳ್ಳಬೇಕು ಕಣೆ ಇದನ್ನೆಲ್ಲಾ! ನಿನ್ನೆ ಮೊನ್ನೆ ಕಣ್ಣು ಬಿಟ್ಟ ಹುಡುಗಿ, ತಂದೆಗೇ ಬುದ್ಧಿ ಹೇಳೋದಕ್ಕೆ ಪ್ರಾರಂಭಿಸಿಬಿಟ್ಟೆ!.

ಸರಸ್ವತಿ—ಏನೋಪ್ಪ ನನಗೆ ತೋರಿದ್ದು ನಾನು ಹೇಳಿದೆ. ಲಲಿತ ಎಲ್ಲಾದರೂ ಚೆನ್ನಾಗಿ ಬದುಕಿಕೊಂಡಿರಲಿ ಅಂತ ಹಾರೈಕೆ ಅಷ್ಟೆ.

ಶಂಕರಪ್ಪ—ಹೂ, ನಿನಗೊಬ್ಬಳಿಗೇ ಅಲ್ಲ; ಹೊಟ್ಟೆಯಲ್ಲಿ ಹುಟ್ಟಿದ ಮಗಳು ಚೆನ್ನಾಗಿ ಬಾಳಲಿ ಅನ್ನುವ ಆಸೆ ನನಗೂ ಇದೆ. ಹು...ನಿನ್ನ ಮಾತು ಕಟ್ಟಿಕೊಂಡೇನು? ಏನೋ ಲೋಕ ಬಲ್ಲವಳ ಹಾಗೆ ಮಾತಾಡುತೀಯೆ! ಲಲಿತ ನೋಡು, ನಿನಗೆ ಒಳ್ಳೆಯದಾಗಲಿ, ಚೆನ್ನಾಗಿ ಬದುಕಲಿ ಅನ್ನುವ ಆಶೆ ಇಟ್ಟುಕೊಂಡೇ ನಾನು ಈ ಯೋಚನೆ ಮಾಡಿರುವುದು. ನಿನಗೆ ಯಾವುದು ಒಳ್ಳೆಯದು ಯಾವುದು ಕೆಟ್ಟದು ಅನ್ನುವುದು ನಿನಗಿಂತಲೂ ಹಿರಿಯರಿಗೆ ಚೆನ್ನಾಗಿ ಗೊತ್ತು. ಮೊದಲಿಂದಲೂ ನಿನ್ನ ಅನಂತನಿಗೆ ಕೊಡುತೇನೆ ಅಂತ ಮನಸ್ಸಿನಲ್ಲಿ ಮಾಡಿಕೊಂಡಿದ್ದದ್ದೇನೋ ನಿಜ. ಆದರೆ ಈಚೆಗೇನೋ ಅವನ ನಡತೆಯೇ ಚೆನ್ನಾಗಿಲ್ಲ. ಒಂದು ಸಂಧ್ಯಾವಂದನೆಯಿಲ್ಲ, ಒಂದು ಮಾಧ್ಯಾಹ್ನಿಕವಿಲ್ಲ. ದೇವರಿಲ್ಲ, ದಿಂಡರಿಲ್ಲ

ಸದಾ ಹೆಂಗಸರ ಹಾಗೆ ಜೈತಲೆ ತಿದ್ದಿಕೊಳ್ಳುತಾ ಕೂತಿರುವುದು ಒಂದೇ ಕೆಲಸ! ಇನ್ನೇನೂ ಇಲ್ಲ ಅಂದರೂ ಬೆಳಗ್ಗೆ ಎದ್ದು ಮೂರು·ಆಚಮನವಾದರೂ ಬೇಡವೇ?

ಸರಸ್ವತಿ—ಎಲ್ಲರೆದುರಿಗೂ ರುದ್ರಾಕ್ಷಿಸರ ಇಟ್ಟುಕೊಂಡು ಕೂತುಕೊಳ್ಳಬೇಕೇನೋ. ಊರೆಲ್ಲಾ ನೋಡಲಿ ಅಂತ?

ಶಂಕರಪ್ಪ—ನೀನೇನು ಅವನ ಕಡೆ ವಕೀಲಿ ವಹಿಸಿಕೊಂಡಿದೀಯೇನೇ....

(ಮತ್ತೆ ಲಲಿತೆಯ ಕಡೆ ತಿರುಗಿ) ಸುಬ್ಬಾಶಾಸ್ತ್ರಿ ಅಂದರೆ ಒಳ್ಳೆಯ ಮನೆತನ, ಮಡಿಹುಡಿ, ಆಚಾರ, ದೇವರು ಬ್ರಾಹ್ಮಣರು ಅಂದರೆ ಭಕ್ತಿ—ಎಲ್ಲಾ ಸಮರ್ಪಕವಾಗಿದೆ. ಮುಖ್ಯ ನೋಡಬೇಕಾದ್ದು ಇದು. ಅವನ್ನ ಮದುವೆಯಾದರೆ ಇಹಕ್ಕೆ ಸುಖ, ಪರಕ್ಕೆ ಗತಿ. ಅದರ ಮೇಲೆ ಬಹಳ ಒಳ್ಳೆಯ ಸ್ವಭಾವ ಅವನದು. ಚಿನ್ನದಂಥ ಮನುಷ್ಯ. ಜಾತಕವೂ ಕೂಡಿಬರುತ್ತೆ ದಾಂಪತ್ಯ ಬಹಳ ಚೆನ್ನಾಗಿದೆ ಅಂತ ಹೇಳಿದರು, ಜೋಯಿಸರು.

ಸರಸ್ವತಿ—ಹೂ, ಮಾಡು ಮದುವೆಯನ್ನ, ಜೋಯಿಸರು ಹೇಳಿದರು ಅಂತ. ಅದು ಬೇರೆ ನೇರವಾಗುವುದಿಲ್ಲ ನಾನು ಏನು ಹೇಳಿದೆ ಅನ್ನು.

ಶಂಕರಪ್ಪ—ಸುಮ್ಮನಿರೆ, ಅಪಶಕುನ ನುಡಿಯಬೇಡ!

ಸರಸ್ವತಿ—ನೀನು ಏನೇ ಹೇಳು ಅಣ್ಣ, ಇವನಿಗೆ ಕೊಟ್ಟು ಮದುವೆ ಮಾಡಿದರೆ ಲಲಿತ ಎಲ್ಲಾದರೂ ಬಾವಿಗೆ ಬಿದ್ದು ಪ್ರಾಣ ಕಳೆದುಕೊಂಡುಬಿಡುತಾಳೆ.

ಶಂಕರಪ್ಪ—ನೀನು ಸುಮ್ಮನೆ ಮಾತು ಹಾಕಿಕೊಂಡು ಬರಬೇಡ. ಇಷ್ಟಕ್ಕೂ ಇದನ್ನು ಕಟ್ಟಿಕೊಂಡು ನಿನಗೇನು? ನನ್ನ ಮಗಳ ಮದುವೆ ಮಾಡುವುದಕ್ಕೆ ನನಗೇ ಸ್ವತಂತ್ರವಿಲ್ಲವೆ?

ಸರಸ್ವತಿ—ಎಲ್ಲಾ ಒಳ್ಳೆಯದಾಗಲಿ ಅಂತ ಹೇಳಿದೆ.

ಶಂಕರಪ್ಪ—ಒಳ್ಳೆಯದಾಗದಿದ್ದರೆ ಹೋಗಲಿ. ನಿನಗೇನು, ಸುಮ್ಮನಿರು (ಲಲಿತೆಯ ಕಡೆ ತಿರುಗಿ) ನೋಡು, ಲಲಿತ....

ಸರಸ್ವತಿ—ಏನೋ ನಾನೂ ಮನೆಯ ಹೆಣ್ಣುಮಗಳು ಅಂತ...

ಶಂಕರಪ್ಪ—ಮನೆಯ ಹೆಣ್ಣುಮಗಳಾದರೆ ದೊಡ್ಡವರ ಮಾತಿಗೆ ಎದುರು ಮಾತಾಡ ಬಾರದು. (ಮತ್ತೆ ಲಲಿತೆಯ ಕಡೆ ತಿರುಗಿ) ಲಲಿತ, ನೀನು....

ಸರಸ್ವತಿ—ದೊಡ್ಡವರು ವಿವೇಚನೆಯಿಲ್ಲದೆ ಕೆಲಸಮಾಡಿದರೆ?

ಶಂಕರಪ್ಪ—ಬೇಡ, ಬೇಡ, ನನಗೆ ಕೋಪಬರುವುದೇ ಅಪರೂಪ; ಬಂದರೆ ನಾನು ಮನುಷ್ಯನಲ್ಲ, ಹೇಳಿದೇನೆ....(ಲಲಿತೆಯ ಕಡೆ ತಿರುಗಿ) ಶಾಸ್ತ್ರಿಗೆ ಇನ್ನೂ ಅಂಥಾದೇನೂ ವಯಸ್ಸಾಗಿಲ್ಲ. ಪೂರ್ವವಯಸ್ಸು.

ಸರಸ್ವತಿ—ಅರವತ್ತು ವರ್ಷದ ಮುದಿಯ ಎಲ್ಲೂ ಸಿಕ್ಕಲಿಲ್ಲವೇನೊ.

ಶಂಕರಪ್ಪ—ಸುಮ್ಮನಿರುತ್ತೀಯೋ ಇಲ್ಲವೇ ನೀನು?

ಸರಸ್ವತಿ—ನಾನು ಸುಮ್ಮನಿರುವುದಿಲ್ಲ ಅಣ್ಣ. ಇಂಥವನಿಗೆ ಕೊಟ್ಟು ಲಲಿತೂಗೆ ಅನ್ಯಾಯ ..

ಶಂಕರಪ್ಪ—ಮುಚ್ಚೇ ಬಾಯಿ!

ಸರಸ್ವತಿ—ಇದೇ ನೀನು ವೈರಾಗ್ಯ ಕಲಿತುಕೊಂಡಿರುವುದು! ನಿನಗೆ ಕೋಪ ಬರುವುದೇ ಅಪರೂಪ ಅಲ್ಲವೇ! ಮೂಗಿನ ತುದಿಯಲ್ಲೇ ಕೂತಿದೆ.

ಶಂಕರಪ್ಪ—ನೀನು ಮಾತಾಡುವುದು ಕೇಳಿದರೆ ಧರ್ಮರಾಯನಂಥವರಿಗೂ ಕೋಪ ಬರುತ್ತೆ! (ಸ್ವಲ್ಪ ಕೋಪವನ್ನು ಸಮಾಧಾನಕ್ಕೆ ತಂದುಕೊಂಡು) ಸುಮ್ಮನೆ ಹೋಗಮ್ಮ ಸರಸು, ನೀನು ನನ್ನ ಕೈಲಿ ಯಾಕೆ ಕೆಟ್ಟ ಮಾತು ಆಡಿಸುತ್ತೀಯೆ!

ಸರಸ್ವತಿ— ಆಗಲಿ, ಸುಮ್ಮನಿರುತ್ತೇನೆ. ಆದರೆ ನನ್ನ ಮನಸ್ಸಿನಲ್ಲಿ ನಾನು ಏನು ಬೇಕಾದರೂ ಯೋಚನೆ ಮಾಡಬಹುದೋ, ಇಲ್ಲ ಅದೂ ಆಗದೋ? ಏನಾಗುತ್ತೆ ಅಂತ ಮನಸ್ಸಿನಲ್ಲಿ ತಿಳಿದುಕೊಂಡೇ ಇದೇನೆ. ಬಾಯಲ್ಲಿ ಆಡದೆ ಇರಬಹುದು.

ಶಂಕರಪ್ಪ—ನೀನು ಏನುಬೇಕಾದರೂ ತಿಳಿದುಕೊಂಡಿರು. ನನ್ನ ಕಿವಿ ಮೇಲೆ ಮಾತ್ರ ಹಾಕಬೇಡ. (ಲಲಿತೆಯ ಕಡೆ ತಿರುಗಿ) ನಾನು ಎಲ್ಲಾ ಯೋಚನೆಯನ್ನೂ ಮಾಡಿ ನಿಶ್ಚಯ ...

ಸರಸ್ವತಿ—(ತನಗೆತಾನೆ ಗಟ್ಟಿಯಾಗಿ) ಈ ಹುಚ್ಚು ಕುಣಿತ ನೋಡಿದರೆ ಬಾಯಿ ಸುಮ್ಮನಿರುವುದಿಲ್ಲ.

ಶಂಕರಪ್ಪ—(ಕಣ್ಣು ಕೆಂಪಗೆ ಮಾಡಿಕೊಂಡು ಒಂದು ಕ್ಷಣ ಸರಸ್ವತಿಯನ್ನು ದುರುಗುಟ್ಟಿಕೊಂಡು ನೋಡುತ್ತಾನೆ. ಸರಸ್ವತಿ ಮೊಂಡುತನದಿಂದ ಅವನ ಕಡೆ ಸ್ವಲ್ಪ ನೋಡಿ ಆಮೇಲೆ ದೃಷ್ಟಿಯನ್ನು ಬೇರೆ ಕಡೆಗೆ ತಿರುಗಿಸುವಳು. ಶಂಕರಪ್ಪ ಮತ್ತೆ ಲಲಿತೆಯ ಕಡೆ ತಿರುಗಿ ಮಾತು ಪ್ರಾರಂಭಿಸುತ್ತಾನೆ.) ಶಾಸ್ತ್ರಿ ನೋಡುವುದಕ್ಕೇನೋ ಸ್ವಲ್ಪ ಕಪ್ಪು ಅಂದರೂ, ಅವನ ಮುಖ

ದಲ್ಲಿ ಒಂದು ತರಹ ವರ್ಚಸ್ಸಿದೆ.

ಸರಸ್ವತಿ—ಹೂ ವರ್ಚಸ್ಸು ಇಲ್ಲದೆ ಏನು! ಬಳಿದು ತೆಗೆಯಬಹುದು!

ಶಂಕರಪ್ಪ—ನನ್ನ ಮಾತು ಅಂದರೆ ಏನು ಲಕ್ಷ್ಯವೇ ಇಲ್ಲವೋ ಸರಸು, ನಿನಗೆ?

ಸರಸ್ವತಿ—ನನ್ನ ಮೇಲೆ ರೇಗಬೇಡ ಅಣ್ಣ, ನೀನು. ನಾನೇನೂ ನಿನ್ನ ಕೈಲಿ ಮಾತಾಡಲಿಲ್ಲ.

ಶಂಕರಪ್ಪ—ಇನ್ನು ಯಾರ ಕೈಲಿ ಮಾತಾಡಿದೆ, ನನ್ನ ಕೈಲಲ್ಲದೆ!

ಸರಸ್ವತಿ—ಯಾರ ಕೈಲೋ. ನನ್ನಷ್ಟಕ್ಕೆ ನಾನೇ ಮಾತಾಡಿಕೊಂಡೆ. ಆ ಕಂಬಕ್ಕೆ ಹೇಳಿದೆ.

ಶಂಕರಪ್ಪ—ನೀನು ನಡಿಯೆ ಆಚೆಗೆ!.... ಲಲಿತ, ನೀನು ಹೇಳಿದ ಹಾಗೆ ಕೇಳಿಕೊಂಡು ಇರಮ್ಮ. ಇವಳ ಮಾತು ಕೇಳಿಕೊಂಡು ಕುಣಿಯ ಬೇಡ.

ಸರಸ್ವತಿ—(ಲಲಿತೆಗೆ) ನನ್ನ ಮಾತು ಕೇಳಿಕೊಂಡು ಕುಣಿಯಬೇಡ ಆ ಶಿಂಗಲೀಕನ್ನ ಕಟ್ಟಿಕೊಂಡು ಕುಣಿ!

(ಶಂಕರಪ್ಪ ರೇಗಿಕೊಂಡು ಕುರ್ಚಿಯನ್ನು ಬಿಟ್ಟು ಏಳುತ್ತಾನೆ. ಸರಸ್ವತಿ ಓಡಿಹೋಗುವಳು.)

ಶಂಕರಪ್ಪ—ಅಬ್ಬಬ್ಬ! ಬಹಳ ಹೆಚ್ಚಿಕೊಂಡುಬಿಟ್ಟಳು ಇವಳು! ಬಹಳ ಹೆಚ್ಚಿಕೊಂಡು ಬಿಟ್ಟಳು! ಅಷ್ಟು ಕಾಣದೆ ಹೇಳುತ್ತಾರೆಯೆ, ಮಕ್ಕಳಿಗೆ ಹೆಚ್ಚು ಸದರ ಕೊಡಬಾರದು ಅಂತ! ಅವಳ ಮಾತು ಕೇಳಿದರೆ ಮೈಯೆಲ್ಲಾ ಉರಿಯುತ್ತೆ! ಅಬ್ಬಬ್ಬಬ್ಬ!

(ಟವಲಿನಿಂದ ಗಾಳಿಹಾಕಿಕೊಳ್ಳುತ್ತಾ ಶಂಕರಪ್ಪ ಹೊರಟುಹೋಗುತ್ತಾನೆ. ಅವನು ಹೋದೊಡನೆಯೇ ಸರಸ್ವತಿ ಪುನಃ ಪ್ರವೇಶಿಸುವಳು.)

ಸರಸ್ವತಿ—(ಕುರ್ಚಿಯಮೇಲೆ ಕುಳಿತುಕೊಂಡು) ಏನೆ ಲಲಿತ, ಮೂಗಿಯ ಹಾಗೆ ಸುಮ್ಮನೆ ಕೂತಿದ್ದೆ? ಅಣ್ಣ ಎಡಎಡವಟ್ಟಾಗ ಮಾತಾಡಿದರೆ, ಹೂ ಇಲ್ಲ ಅನ್ನಬೇಡವೆ ನೀನು? ನೀನಾಡಬೇಕಾದ ಮಾತೆಲ್ಲಾ ನಾನು ಆಡಬೇಕಾಯಿತು.

ಲಲಿತ—ಅಣ್ಣ ಮಾಡೇ ತೀರುತ್ತೇನೆ ಅಂತ ಹಟ ಹಿಡಿದಿರುವಾಗ ನನ್ನ ಮಾತು ಯಾರು ಕೇಳುತಾರೆ? ನನ್ನ ಏನು ಮಾಡ ಹೇಳುತೀಯೆ?

ಸರಸ್ವತಿ—ಏನಾದರೂ ಮಾಡು. ಮದುವೆಗೆ ಒಪ್ಪಬೇಡ.

ಲಲಿತ—ಏನಾದರೂ ಮಾಡು ಅಂದರೆ?

ಸರಸ್ವತಿ—ಅಣ್ಣನಿಗೆ ಹೇಳು: ಮದುವೆ ಮಾಡಿಕೊಳ್ಳುವವಳು ನಾನು, ನೀನಲ್ಲ; ನಿನ್ನ ಮನಸ್ಸು ಒಪ್ಪಿದರೆ ಆಯಿತೆ, ನನ್ನ ಮನಸ್ಸು ಒಪ್ಪಬೇಡವೆ ಅಂತ. ಆ ಶಾಸ್ತ್ರಿ ಅಷ್ಟೊಂದು ವರ್ಚಸ್ಸು ಇರೋನಾದರೆ ನೀನೆ ಅವನ್ನ ಜೊತೆಯಲ್ಲಿ ಕೂರಿಸಿಕೊಂಡು ಆರತಿ ಎತ್ತಿಸಿಕೊ ಅನ್ನು.

ಲಲಿತ—ಅಣ್ಣನೆದುರಿಗೆ ನಿಂತುಕೊಂಡು ಹಾಗೆಲ್ಲಾ ಅನ್ನುವುದಕ್ಕಾಗುತ್ತೆ ಯೇನೆ? ನೀನೇನೋ ಆಡಿಬಿಡುತ್ತೀಯಮ್ಮ. ನನಗೆ ಹೆದರಿಕೆ

ಸರಸ್ವತಿ—ನೀನು ಶುದ್ಧ ಮೆದುಗಿ ಕಣೆ. ಅಷ್ಟು ದಿನದಿಂದ ಅನಂತನಿಗೆ ಕೊಡಬೇಕು ಅಂತಿದ್ದು... (ಸ್ವಲ್ಪ ಕಿರುನಗೆ ನಗುತ್ತಾ)ನಿನಗೆ ಅನಂತು ಕಂಡರೆ ಪ್ರೀತಿ ಇಲ್ಲವೇನೇ?

ಲಲಿತ—(ನಾಚಿಕೆಯಿಂದ)ನನ್ನ ಏನು ಕೇಳುತ್ತೀಯೆ? ನಾನು....

ಸರಸ್ವತಿ—ಹಾಗೆ ಪ್ರೀತಿಯಿದ್ದಿದ್ದರೆ ಅಣ್ಣನ ಮಾತು ಕೇಳಿಕೊಂಡು ಸುಮ್ಮನೆ ಕೂತಿರುತಿದ್ದೆಯಾ?

ಲಲಿತ—ನನ್ನ ಮನಸ್ಸು ನಿನಗೆ ಗೊತ್ತಿಲ್ಲವೇನೆ?

ಸರಸ್ವತಿ—(ಸ್ವಲ್ಪ ನಕ್ಕು)ಹಾಗಾದರೆ ಅನಂತನ್ನೇ ಮದುವೆಯಾಗಬೇಕು ಅಂತ ಲೇನೇ, ನಿನ್ನ ಮನಸ್ಸಿನಲ್ಲಿ?

ಲಲಿತ—(ನಾಚಿಕೆಯನ್ನೂ ಕೃತ್ರಿಮ ಕೋಪವನ್ನೂ ಸೂಚಿಸಿ) ಹೋಗೇ ನೀನು ಸುಮ್ಮನೆ!

ಸರಸ್ವತಿ—ಹಾಗಾದರೆ ಶಾಸ್ತ್ರಿಯನ್ನ ಮದುವೆ ಮಾಡಿಕೊ ಅಂತ ಅಣ್ಣ ಹೇಳುತ್ತಾನಲ್ಲ, ಈಗೇನು ಮಾಡುತೀಯೆ?

ಲಲಿತ—ಅಣ್ಣ ಹಾಗಂತಲೇ ಹಟ ಹಿಡಿದರೆ ನಾನು ಪ್ರಾಣ ಕಳೆದುಕೊಂಡು ಬಿಡುತೇನೆ.

ಸರಸ್ವತಿ—ನಿಜ ನೋಡು. ನನಗೆ ಹೊಳೆಯಲೇ ಇಲ್ಲ. ಪ್ರಾಣ ಕಳೆದುಕೊಂಡು ಬಿಟ್ಟರಾಯಿತು. ಯಾವ ತೊಂದರೆಯೂ ಇಲ್ಲ! ಒಳ್ಳೆ ದಿವ್ಯನಾದ ಉಪಾಯ ಹುಡುಕಿದೀಯೆ....(ಸ್ವಲ್ಪ ಕೋಪದಿಂದ) ನಿನ್ನ ಮಾತು ಕೇಳಿದರೆ ನನಗೆ ಮೈ ಪರಚಿಕೊಂಡು ಹೋಗೋಣ ಅನ್ನುವಷ್ಟು ಅಸಹ್ಯವಾಗುತ್ತೆ.

ಲಲಿತ—ಏನೆ ಸರಸು, ನೀನೂ ನನ್ನ ಮೇಲೆ ರೇಗುತೀಯೆ. ನನ್ನ ಕಂಡರೆ ಎಲ್ಲರಿಗೂ ಹಾಗೇ!

ಸರಸ್ವತಿ—ಮತ್ತೆ ಈ ತೊಂದರೆ ಬಂದಿರುವಾಗ ಮಾತಾಡದೆ ಮೆತ್ತಗಿದ್ದರೆ ಯಾರೇನು ಮಾಡುವುದಕ್ಕಾಗುತ್ತೆ? ಹಸಿಗಣ್ಣು ಮಾಡಿಕೊಂಡು ಇಲ್ಲಿ ಕೂತಿದ್ದರೆ ಏನಾದ ಹಾಗಾಯಿತು?

ಲಲಿತ—ನಾನೇನು ಮಾಡಲಿ? ನಾನು ಹೇಳುವುದಕ್ಕಾಗುತ್ತೆಯೆ?

ಸರಸ್ವತಿ—ಹೌದು, ಧೈರ್ಯವಾಗಿ ಹೇಳಬೇಕು. ಮದುವೆ ಆಗೋರೇ ಸುಮ್ಮ ನಿದ್ದರೆ ಬಾಕಿಯುವರಿಗೇನು?

ಲಲಿತ—ಹೂ. ಧೈರ್ಯವಾಗಿ ಹೇಳಬೇಕು. ನಾಚಿಕೆಗೆಟ್ಟ ಹುಡುಗಿ ಅನ್ನಿಸಿ ಕೊಳ್ಳುವುದಕ್ಕೆ!

ಸರಸ್ವತಿ—ಬೇಡಮ್ಮ. ಹೇಳಬೇಡ ಹಾಗಾದರೆ. ಆ ಶಾಸ್ತ್ರಿಯನ್ನೇ ಮದುವೆ ಮಾಡಿಕೊ. ನಿನಗೆ ಇಷ್ಟವಿರುವಾಗ ನಾನು ಯಾಕೆ ಅಡ್ಡಿ ಬರಲಿ? ಏಳು ಜನ್ಮ ತಪಸ್ಸು ಮಾಡಿದರೆ ಸಿಕ್ಕಿಯಾನೆ ಅಂಥ ವರ! ಎಂಥ ರೂಪು, ಎಂಥ ಮನೆತನ, ಎಂಥ ಗುಣ! ಪುಣ್ಯ ಮಾಡಿದ್ದೆ ಕಣೆ ಅಂಥ ಗಂಡನ ಕೈ ಹಿಡಿಯುವುದಕ್ಕೆ!

ಲಲಿತ—ಸುಮ್ಮನೆ ನನ್ನ ಹಾಸ್ಯಮಾಡಬೇಡಮ್ಮ, ನೀನು ಹೇಳಿದ ಹಾಗೆ ಕೇಳು ತೇನೆ. ಅದೇನು ಮಾಡು ಅಂತೀಯೆ?

ಸರಸ್ವತಿ—ನಾನು ಯಾಕಮ್ಮ ಹೇಳುವುದಕ್ಕೆ ಬರಲಿ! ಹೆಣ್ಣುಮಕ್ಕಳು ತಂದೆ ಹೇಳಿದ ಹಾಗೆ ಕೇಳಬೇಕು. ಮುಂಗನ್ನ ಮದುವೆ ಮಾಡಿಕೊ ಅಂದರೂ ಮಾಡಿಕೊಳ್ಳಬೇಕು (ಸ್ವಲ್ಪ ನಗುತ್ತಾ) ಇಷ್ಟರ ಮೇಲೆ ಆ ಶಾಸ್ತ್ರಿ ಏನಾಗಿದಾನೆಯೆ? ನಿನಗೇನು ಅವನ ಸೇವೆ ಮಾಡುವ ಕಷ್ಟವಿಲ್ಲ. ಒಂದು ಪಂಚಪಾತ್ರೆ ನೀರು, ಒಂದು ಅರ್ಘ್ಯಪಾತ್ರೆ ತಂದಿರಿಸಿದರೆ ಸರಿ. ಮೂಗು ಹಿಡಿದುಕೊಂಡು ಸಂಜೆಯುವರೆಗೂ ಕೂತಿರುತಾನೆ. ಅವನ ಹಳ್ಳಿಗೆ ಹೋದರೆ ಹೊಳೆಯಿಂದ ನೀರು ಹೊತ್ತುಕೊಂಡು ಬರುವುದು, ಒಂದೊಂದು ಕುಕ್ಕೆ ಬಟ್ಟೆ ಒಗೆದು ಒಣಹಾಕುವುದು— ಇಷ್ಟು ತಾನೆ ಕೆಲಸ? ಹೆಣ್ಣಾಗಿ ಹುಟ್ಟಿ ಇದಕ್ಕೆಲ್ಲಾ ಅತ್ತರೆ ಆಗು ತ್ತೆಯೆ? ಹೊಳೆಯಿಂದ ನೀರು ಹೊತ್ತರೆ ಮೈಗೆ ಬಲ ಬರುತ್ತೆ.

ಲಲಿತ—ಯಾಕೆ ಸರಸು, ನನ್ನ ಗೋಳುಹುಯ್ಕೊಳ್ಳುತೀಯೆ, ಏನಾದರೂ ಉಪಾಯ ಹೇಳುವುದು ಬಿಟ್ಟು?

ಸರಸ್ವತಿ—ನನಗೆ ಯಾಕಮ್ಮ. ಮದುವೆ ಮಾಡೋರುಂಟು. ಮಾಡಿಕೊಳ್ಳೋ

ರುಂಟು.

ಲಲಿತ—(ಮನಸ್ಸು ಕರಗಿಸುವಂತೆ) ಸರಸು ...

ಸರಸ್ವತಿ—ನಿನ್ನ ಹಾಗೆ ಮೆತ್ತಗಿರೋರಿಗೆ ಹಾಗೇ ಆಗಬೇಕು.

ಲಲಿತ—ಅಣ್ಣನ ಕೈಲಿ ಬಾಯಿಬಿಟ್ಟು ಹೇಳಿಬಿಡಲೇನೆ?

ಸರಸ್ವತಿ—ಸುಬ್ಬಾಶಾಸ್ತ್ರಿಗಳ ಮುಂದೆ ಅನಂತುವೆ?

ಲಲಿತ—ನಿನಗೆ ಗೊತ್ತಿಲ್ಲವೇನೆ? ನಾನು ...

ಸರಸ್ವತಿ—ಗೊತ್ತಿದೆ. ಶಾಸ್ತ್ರಿಗಳೇ ಯಜಮಾನರಾಗಬೇಕು ಅಂತ ತಾನೆ?

ಲಲಿತ—(ಸ್ವಲ್ಪ ಅಳುವವಳಂತೆ) ಅಕ್ಕ ಅಂತ ನಿನ್ನ ಕೈಲಿ ದುಃಖ ಹೇಳಿಕೊಂಡರೆ ಹೀಗೆ. ಇಷ್ಟಕ್ಕೂ ನಾನು ಸಂಕಟಪಟ್ಟುಕೊಂಡರೆ ನಿನಗೇನು! (ಎದ್ದು ಹೋಗುತ್ತಿರುವಳು)

ಸರಸ್ವತಿ—(ಎದ್ದು ಹೋಗಿ ಅವಳನ್ನು ಕರೆದುಕೊಂಡು ಬಂದು) ಬಾ ಲಲಿತು. ಸುಮ್ಮನೆ ನಿನ್ನ ರೇಗಿಸಿ ಸ್ವಲ್ಪ ಧೈರ್ಯ ಬರುವ ಹಾಗೆ ಮಾಡೋಣ ಅಂತ ಹಾಗೆ ಮಾತಾಡಿದೆ ಅಷ್ಟೆ. ನೀನು ಸಂಕಟಪಟ್ಟುಕೊಂಡರೆ ನನಗೆ ಸಂಕಟವಿಲ್ಲವೆ?

ಲಲಿತ—ಪ್ರಾಣ ಹೋದರೂ ನಾನು ಈ ಮದುವೆಗೆ ಒಪ್ಪುವುದಿಲ್ಲ.

ಸರಸ್ವತಿ—ಪ್ರಾಣ ಹೋಗುವುದೂ ಬೇಡ, ಏನೂ ಬೇಡ, ನಾನು ಹೇಳುತೇನೆ. ಸುಮ್ಮನಿರು. ಅಲ್ಲಿ ನೋಡು, ಅನಂತ ಬಂದ.

(ಅನಂತ ಪ್ರವೇಶಿಸುತ್ತಾನೆ. ಅವನಿಗೆ ಸುಮಾರು ಇಪ್ಪತ್ತು ವರ್ಷ. ಟೆನಿಸ್ ಷರಟನ್ನೂ ತೆರೆದ ಕಾಲರಿನ ಅಂಗಿಯನ್ನೂ ಹಾಕಿಕೊಂಡಿದಾನೆ ತಲೆಗೆ ಟೋಪಿಯಿಲ್ಲ; ಅಂದವಾಗಿ ಕ್ರಾಪು ಬಾಚಿಕೊಂಡಿದಾನೆ.

ಅನಂತನು ಬರುತ್ತಲೆ ಸರಸ್ವತಿ ಮೇಜಿನ ಬಳಿಗೆ ಹೋಗಿ ನಿಂತು ಕೊಳ್ಳುತ್ತಾಳೆ)

ಅನಂತ—(ಕುರ್ಚಿಯ ಬೆನ್ನನ್ನು ಹಿಡಿದುಕೊಂಡು ನಿಂತು, ಸ್ವಲ್ಪ ಬಿಗುಮಾನದ ನಗೆಯೊಡನೆ)

ಏನು ಲಲಿತಮ್ಮ, ಏನೋ ಹೊಸ ವರ್ತಮಾನ ಕೇಳಿದೆ ಇವತ್ತು? ಕೇಳಿ ಬಹಳ ಸಂತೋಷವಾಯಿತು.

ಸರಸ್ವತಿ—(ಲಲಿತೆಗೆ) ಓಹೋ ಇವತ್ತೇನೇ, ಬಹಳ ಮರ್ಯಾದೆ ನಿನಗೆ? ಲಲಿತಮ್ಮ ಆಗಿಬಿಟ್ಟೆದೀಯೆ?

ಲಲಿತ—(ಸ್ವಲ್ಪ ಕತ್ತೆತ್ತಿ ಅನಂತನ ಕಡೆ ನೋಡಿ) ಏನು ಅಂಥ ವರ್ತಮಾನ?

ಅನಂತ—ನಿನಗೆ ಮದುವೆಯಂತೆ, ಸುಬ್ಬಾಶಾಸ್ತ್ರಿಗಳಿಗೆ ಕೊಟ್ಟು?

ಲಲಿತ—ಅಣ್ಣ ಹಾಗಂತಾ ಇದ್ದ.

ಅನಂತ—ಹಾಗಾದರೆ ನಾನು ಕೇಳಿದ್ದು ನಿಜ?

ಲಲಿತ—ಅಣ್ಣ ಹಾಗಂದುಕೊಂಡಿರುವುದು ನಿಜ.

ಅನಂತ—ನೀನೇನು ಹೇಳಬೇಕು ಅಂತಿದೀಯೆ?

ಲಲಿತ—ನನಗೇನೂ ತೋರುವುದಿಲ್ಲ.

ಅನಂತ—ಏನೂ ತೋರುವುದಿಲ್ಲವೆ? ಸರಿ, ಹಾಗಾದರೆ.......

ಲಲಿತ— ನೀನೇನು ಹೇಳುತೀಯೆ?

ಅನಂತ—(ಮತ್ತಷ್ಟು ಬಿಗುಮಾನದಿಂದ) ನಾನು ಹೇಳುವುದೇನು ? ಪ್ರಶಸ್ತ ವಾಗಿದೆ, ಮದುವೆ ನಡೆಯಬಹುದು.

ಲಲಿತ—ಶಾಸ್ತ್ರಿಗಳನ್ನ ಮದುವೆ.......

ಅನಂತ—ಯಾಕಾಗಬಾರದು?

ಲಲಿತ—(ತಾನೂ ಬಿಗುಮಾನದಿಂದ) ಆಗಲಪ್ಪ, ನಿನ್ನ ಮಾತು ಹೇಗೆ ತೆಗೆದು ಹಾಕುವುದು!

ಅನಂತ—ನಿನ್ನ ಮನಸ್ಸಿಗೆ ಒಪ್ಪಿಗೆಯಾಗಿರುವಾಗ ಯಾಕಾಗಬಾರದು?

ಲಲಿತ—ನಿನ್ನ ಮನಸ್ಸಿಗೂ ಒಪ್ಪು ಅಂದೆಯಲ್ಲ, ಸರಿ.

ಅನಂತ—ನಿನ್ನ ಇಷ್ಟಕ್ಕೆ ನಾನು ಯಾಕೆ ವಿರೋಧವಾಗಿ ಬರಲಿ ಅಂತ ಆಗ ಬಹುದು ಅಂದೆ.

ಲಲಿತ-- ನೀನು ಆಗಬಹುದು ಅಂದ ಮೇಲೆ ನಾನು ಯಾಕೆ ವಿರೋಧವಾಗಿ ನಡೆ ಯಲಿ?

(ಸರಸ್ವತಿ ಇವರ ಜಗಳವನ್ನು ನೋಡಿ ಮುಗುಳುನಗೆ ನಗುತ್ತಾ ಇವರ ಮಾತುಗಳನ್ನು ಕೇಳುತ್ತಾ ಮೇಜಿನ ಬಳಿಯಲ್ಲೇ ಇರುವಳು.)

ಅನಂತ—ನಿಮ್ಮ ಅಣ್ಣ ಮುಂಚಿನಿಂದಲೂ ಏನೋ ಹೇಳುತಾ ಇದ್ದರು ...

ಲಲಿತ—ಅದೆಲ್ಲಾ ಯಾಕೆ ಇನ್ನು? ನೀನೇ ಬಾಯಿಬಿಟ್ಟು ಹೇಳಿದೆಯಲ್ಲ, ಶಾಸ್ತ್ರಿ ಗಳನ್ನು ಮದುವೆ ಮಾಡಿಕೊ ಅಂತ!

ಅನಂತ—ನಾನು ಹೇಳಿದ್ದು ಒಂದು ನೆವ ಸಿಕ್ಕಿದ ಹಾಗಾಯಿತೇನೋ.

ಲಲಿತ—ಹೌದು. ಹಾಗೇ ತಿಳಿದುಕೊ.

ಅನಂತ—ನಿಮ್ಮ ಅಣ್ಣ ಹೇಳುತಾ ಇದ್ದದ್ದು ಕೇಳಿ ನಾನು ಏನೋ ಅಂದ

ಕೊಂಡಿದ್ದೆ. ನನಗೇನೋ ಭ್ರಾಂತಿ. ಅದನ್ನೆಲ್ಲಾ ಮರೆತುಬಿಡಬೇಕು.

ಲಲಿತ—ಮರೆಯದೆ ಏನು! ನಿನಗೇನೂ ಮರೆಯುವುದು ಕಷ್ಟವಾಗುವುದಿಲ್ಲ ಅಂತ ತೋರುತ್ತೆ.

ಅನಂತ—ಹೌದು ನಾವು ಒಬ್ಬರಿಗೆ ಬೇಡವಾದ ಮೇಲೆ ಸುಮ್ಮನೆ ಜ್ಞಾಪಿಸಿ ಕೊಂಡು ದುಃಖಪಟ್ಟರೆ ಏನಾದ ಹಾಗಾಯಿತು? ನಾವು ನಾಚಿಕೆ ಗೇಡಾಗ ಬೇಕಾಗುತ್ತೆ ಅಷ್ಟೆ.

ಲಲಿತ—ನಿಜ.

ಅನಂತ—ನೀನು ಇನ್ನೊಬ್ಬರನ್ನು ಮದುವೆಯಾದ ಮೇಲೆ ಮರೆಯದೆ ಇನ್ನೇನು?

ಲಲಿತ—ಸರಿ, ಮರೆತುಬಿಡು.

ಅನಂತ—(ಸ್ವಲ್ಪ ಕೋಪದಿಂದ) ಆಗಲಿ, ನಾನು ನಿನ್ನ ಕೈಲಿ ಈ ಮಾತೆತ್ತಿದ್ದೇ ತಪ್ಪು. ನಿನ್ನ ಮನಸ್ಸು ಹೀಗಿದೆ ಅಂತ ಗೊತ್ತಾಗಲಿಲ್ಲ. ನಾನಿಲ್ಲಿದ್ದು ಯಾಕೆ ತೊಂದರೆ ಕೊಡಲಿ? ಹೊರಡುತೇನೆ. (ಕುರ್ಚಿಯನ್ನು ಬಿಟ್ಟು ಏಳುವುದೇ ಇಲ್ಲ)

ಲಲಿತ—ಹೂ, ಹೊರಡು.

ಅನಂತ—ನೀನೇ ಹೋಗು ಅಂತ ಹೇಳಿದೀಯೆ ಜ್ಞಾಪಕವಿರಲಿ.

ಲಲಿತ—ಹಾಗೇ ತಿಳಿದುಕೊ.

ಅನಂತ—(ಕುರ್ಚಿಯನ್ನು ಬಿಟ್ಟೆದ್ದು ಅಲ್ಲಿಯೇ ನಿಂತುಕೊಂಡು)ನೀನು ಹೋಗು ಅಂದ ಮೇಲೆ ನಾನು ಹೊರಟಿದೇನೆ.

ಲಲಿತ—ನಾನು ಹೇಳಿದೆ, ಹೂಂ!

ಅನಂತ—(ಅಲ್ಲಿಯೇ ನಿಂತುಕೊಂಡು) ಸಾಕು, ಇನ್ನೇನು ಮಾತು, ಹೋಗು ತೇನೆ

ಲಲಿತ—ಹೋಗು, ನನಗೆ ಹೇಳುವುದೇನು !

ಅನಂತ—(ಬಾಗಿಲಿನ ಕಡೆಗೆ ಎರಡು ಹೆಜ್ಜೆ ಹೋಗಿ ಹಿಂದಕ್ಕೆ ತಿರುಗಿ) ತಿರುಗಿ ಬಂದು ನಿನಗೆ ತೊಂದರೆ ಕೊಡುವುದಿಲ್ಲ

ಲಲಿತ—ಸರಿಯೆ.

ಅನಂತ—(ಬಾಗಿಲಿನ ವರೆಗೂ ನಿಧಾನವಾಗಿ ಹೋಗಿ ಪುನಃ ಹಿಂತಿರುಗಿ ಬಂದು) ಏನಂದೆ?

ಲಲಿತ—ಏನು ಅಂದದ್ದು?

ಅನಂತ—ನೀನು ನನ್ನ ಕರೆಯಲಿಲ್ಲವೇ?

ಲಲಿತ—ಇಲ್ಲ.

ಅನಂತ—ಸರಿ ಹಾಗಾದರೆ. ಹೋಗುತೇನೆ. (ನಿಧಾನವಾಗಿ ಹೋಗುತ್ತಿರುವನು. ಲಲಿತ ಆ ಕಡೆ ನೋಡುತ್ತಿರುವಳು.)

ಸರಸ್ವತಿ—(ಲಲಿತ ಕುಳಿತಿದ್ದ ಕುರ್ಚಿಯ ಬಳಿಗೆ ಬಂದು) ನಿಮ್ಮಿಬ್ಬರಿಗೂ ಎಲ್ಲೋ ಬುದ್ಧಿ ಸರಿಯಾಗಿಲ್ಲ. ಏನೆ ಲಲಿತ, ಅಣ್ಣನೆದುರಿಗೆ ಕಲ್ಲು ಬೊಂಬೆಯ ಹಾಗೆ ಕೂತಿದ್ದವಳು ಅನಂತ ಬಂದಮೇಲೆ ಅರಳು ಹುರಿದ ಹಾಗೆ ಮಾತಿಗೆ ಶುರುಮಾಡಿಬಿಟ್ಟೆ! ಲೋ ಅನಂತ!

ಅನಂತ—(ಬಾಗಿಲ ಬಳಿಯಲ್ಲೇ ನಿಂತು)ಏನು?

ಸರಸ್ವತಿ—ಇಲ್ಲಿ ಬಾರೋ, ಹೇಳುತೇನೆ.

ಅನಂತ—(ನಿಧಾನವಾಗಿ ಬರುತ್ತಾ) ಇಲ್ಲ ನಾನು ಬರುವುದಿಲ್ಲ. ನಾನು ಬಂದರೆ ಲಲಿತನಿಗೆ ಕೋಪ.

ಸರಸ್ವತಿ—(ನಗುತ್ತಾ) ನಾನು ಎಲ್ಲಾ ಕಂಡಿದೇನೆ ಬಾ.

ಲಲಿತ—ಅವನಿಗೆ ನಾನಿದ್ದಕಡೆ ಬರುವುದಕ್ಕೆ ಇಷ್ಟವಿಲ್ಲವೋ ಏನೊ. ನನ್ನಿಂದ ಯಾಕೆ ಒಬ್ಬರಿಗೆ ತೊಂದರೆ? ನಾನು ಹೋಗುತೇನೆ.

ಸರಸ್ವತಿ—ಇನ್ನು ಇವಳನ್ನು ಹಿಡಿಯಬೇಕು. (ಲಲಿತೆಯನ್ನು ಹಿಡಿದುಕೊಂಡು) ಎಲ್ಲಿಗೆ ಹೋಗುತೀಯೇ?

ಲಲಿತ—ಬಿಡೆ, ಸರಸು!

ಸರಸ್ವತಿ—ಸುಮ್ಮನೆ ಹೇಳಿದ ಹಾಗೆ ಕೇಳು ಬಾ.

ಅನಂತ—ನಾನು ಬಂದೆ ಅಂತ ಅವಳು ಹೊರಟುಹೋಗುತಾಳೇನೊ, ನನ್ನಿಂದ ಯಾಕೆ ತೊಂದರೆ! (ಹೋಗುವವನಂತೆ ಬಾಗಿಲಿನ ಕಡೆ ತಿರುಗುತ್ತಾನೆ.)

ಸರಸ್ವತಿ—ಸರಿ, ಇವನಿಗೆ ಮತ್ತೆ ಹುಚ್ಚು ಹಿಡಿಯಿತು, ಬಾರೋ ಇಲ್ಲಿ.

ಅನಂತ—(ಹಿಂತಿರುಗಿ ಬಂದು) ಏನು?

ಲಲಿತ—ಯಾಕೆ, ಬಿಡೆ ಸರಸು!

ಸರಸ್ವತಿ— ಯಾಕೋ ಅನಂತ, ಲಲಿತು ಕೈಲಿ ಜಗಳ?

ಅನಂತ—ಅವಳು ಹೇಳದ್ದು ಕೇಳಲಿಲ್ಲವೆ ನಿನಗೆ?

ಸರಸ್ವತಿ—ಯಾಕೆ ಲಲಿತ, ಅಷ್ಟೊಂದು ಕೋಪ?

ಲಲಿತ—ಅವನು ಅಂದದ್ದು ಒಂದೂ ಲೆಕ್ಕಕ್ಕಿಲ್ಲವೇನೊ!

ಸರಸ್ವತಿ—ನಿನಗೆ ಬುದ್ಧಿಯಿಲ್ಲ. ನಿಜವಾಗಿಯೂ ಅವಳು ಆ ಶಾಸ್ತ್ರೀನ ಮದುವೆ ಮಾಡಿಕೊಳ್ಳೋದಕ್ಕೆ ಒಪ್ಪುತಾಳೇನೊ ?

ಲಲಿತ—ಅವನು ಆಗಬಹುದು ಅಂತ ಹೇಳಬಹುದೇನೊ!

ಅನಂತ—ಏನು ಮಾಡಲಿ ಅಂತ ನನ್ನ ಕೇಳಿದರೆ ನಾನಿನ್ನೇನು ಹೇಳಲಿ?

ಸರಸ್ವತಿ—(ನಗುತ್ತಾ) ಸುಮ್ಮನಿರಿ. ಗಂಡ ಹೆಂಡತಿ ಆಗುವುದಕ್ಕಿಂತ ಮುಂಚೆಯೇ ಜಗಳ ಆಡಿ ಮುಗಿಸಿಬಿಡಬೇಡಿ.

ಲಲಿತ—ನೀನು ಹೋಗೇ ನೀನು ಸರಸು!

ಅನಂತ—(ಲಲಿತೆಗೆ) ನನ್ನ ಕೈಲಿ ಜಗಳ ತೆಗೆದು ಹೋಗಬಹುದೋ ನೀನು ?

ಲಲಿತ—ನೀನು ನನ್ನ ಮರೆತುಬಿಡುತೇನೆ ಅಂದೆಯಲ್ಲ!

ಸರಸ್ವತಿ—ಅದು ಹೋಗಲಿ ಬಿಡು ಲಲಿತ ಈಗ ಈ ಶಾಸ್ತ್ರಿಯ ವಿಷಯ ಏನು ಮಾಡುವುದು?

ಅನಂತ—ಏನಾದರೂ ಉಪಾಯ ಹುಡುಕಬೇಕು.

ಸರಸ್ವತಿ—ನೋಡೋಣ. ನೀನು ಯಾರ ಕೈಲಾದರೂ ಅಣ್ಣನಿಗೆ ಹೇಳಿಸು. ನಾನೂ ಚಿಕ್ಕಮ್ಮನ ಕೈಲಿ ಹೇಳಿಸುತೇನೆ. (ಬಾಗಿಲಿನ ಕಡೆಗೆ ಹೋಗುತ್ತಾ ಇರುವಳು)

ಅನಂತ—(ನಗುಮುಖದಿಂದ ಮೆಲ್ಲನೆ) ಪಾಪ, ನೀನು ಕೋಪ ಮಾಡಿಕೊಳ್ಳಲೇ ಇಲ್ಲ, ಅಲ್ಲವೆ!

ಸರಸ್ವತಿ—(ನಗುತ್ತಾ ಹಿಂತಿರುಗಿ ಬಂದು) ಸರಿ, ಇಷ್ಟು ಹೊತ್ತೂ ಜಗಳ ವಾಯಿತು. ಇನ್ನು ಮಾತಿಗೆ ಶುರು! ನಡಿಯೋ ನೀನು! (ಲಲಿತೆಯನ್ನು ಕರೆದುಕೊಂಡು ಹೋಗುತ್ತಾಳೆ.)

ಪರದೆ

## ಮೂರನೆಯ ದೃಶ್ಯ

[ಹಜಾರದಲ್ಲಿ ಸರಸ್ವತಿ ಕುಳಿತಿದಾಳೆ. ರಾಮು ಮೇಜನ್ನು ಒರಗಿಕೊಂಡು ನಿಂತಿದಾನೆ.]

ರಾಮು—ಏನು ಸರಸು, ಅಣ್ಣನಿಗೂ ನಿನಗೂ ತುಂಬ ಮಾತುಕಥೆ ಆಯಿತಂತಲ್ಲ? ಅಣ್ಣ ಏನೋ ರೇಗಿಬಿಟ್ಟಿದ್ದನಂತೆ?

ಸರಸ್ವತಿ—ಇನ್ನೇನು. ಈ ಮದುವೆಯ ಮಾತು. ನನಗೆ ತೋರಿದ್ದು ನಾನು ಹೇಳಿದೆ. ಅಣ್ಣನಿಗೆ ಕೋಪ ಬಂದುಬಿಟ್ಟಿತು. (ಹೊರಗೆ ಬಾಗಿಲು ತಟ್ಟಿದ ಸದ್ದು.) ಯಾರು ನೋಡು?

(ರಾಮು ಹೋಗಿ ಬಾಗಿಲು ತೆಗೆಯುತ್ತಾನೆ. ಇನ್ಸ್ಪೆಕ್ಟರು ಶ್ರೀನಿವಾಸರಾಯನು ಪ್ರವೇಶಿಸುತ್ತಾನೆ. ಸಾಧಾರಣವಾದ ಸೂಟನ್ನು ಹಾಕಿಕೊಂಡು ತಲೆಗೆ ಪೋಲೀಸಿನವರು ಸುತ್ತುವ ರೀತಿಯಲ್ಲಿ ದಪ್ಪವಾಗಿ ರೇಷ್ಮೆಯ ರುಮಾಲನ್ನು ಸುತ್ತಿದಾನೆ. ಕೈಯಲ್ಲಿ ಪೋಲೀಸಿನವರು ಹಿಡಿದುಕೊಳ್ಳುವಂಥ ಸಣ್ಣ ಬೆತ್ತ. ಇನ್ಸ್ಪೆಕ್ಟರು ಬಂದದ್ದನ್ನು ನೋಡಿ ಸರಸ್ವತಿ ಒಳಕ್ಕೆ ಹೋಗುವಳು.)

ಇನ್ಸ್ಪೆಕ್ಟರು—ಏನಯ್ಯ ರಾಮು, ಶಂಕರಪ್ಪನವರು ಇದಾರೆಯೆ?

ರಾಮು—ಬನ್ನಿ ಇನ್ಸ್ಪೆಕ್ಟರೆ, ಕೂತುಕೊಳ್ಳಿ. ಅಣ್ಣ ಮನೆಯಲ್ಲಿಲ್ಲ. ನೋಡಬೇಕಾಗಿತ್ತೇನು?

ಇನ್ಸ್ಪೆಕ್ಟರು—ಅಂಥ ಕೆಲಸವೇನೂ ಇಲ್ಲ. ಈ ಕಡೆ ಬಂದಿದ್ದೆ. ಮನೆಯಲ್ಲಿದ್ದರೆ ನೋಡೋಣ ಅಂತ ಹಾಗೇ ಕೂಗಿದೆ.

ರಾಮು—ಇನ್ನೇನು ಬರುವ ಹೊತ್ತಾಯಿತು. ಕೂತುಕೊಳ್ಳಿ.

(ಒಂದು ಕುರ್ಚಿಯನ್ನು ಇನ್ಸ್ಪೆಕ್ಟರ ಹತ್ತಿರಕ್ಕೆ ತಂದಿಡುತ್ತಾನೆ.)

ಇನ್ಸ್ಪೆಕ್ಟರು—ಪರವಾಯಿಲ್ಲ ಬಿಡು ರಾಮು. (ಕುಳಿತುಕೊಂಡು) ನಿಮ್ಮ ಮನೆಗೆ ಅದು ಯಾರೋ ಶಾಸ್ತ್ರಿಗಳು ಬಂದಿದಾರಂತಲ್ಲಯ್ಯಾ? ಬಹಳ ಒಳ್ಳೆಯವರು, ನಿಸ್ಪೃಹರು ಅಂತಿದ್ದರು

ರಾಮು—ಸುಬ್ಬಾಶಾಸ್ತ್ರಿಗಳು? ಹೌದು. ಬಂದು ಆಗಲೇ ಮೂರು ನಾಲ್ಕು ತಿಂಗಳಾಯಿತು.

ಇನ್ಸ್ಪೆಕ್ಟರು—ಬಂದು ಇಲ್ಲೇ ಇದಾರೆ ಅಂತ ಕೇಳಿದ್ದೆ. ನಾಲ್ಕು ತಿಂಗಳಾ

ಯಿತೆ? ಯಾವಾಗ ಹೇಳು ಅವರು ಬಂದದ್ದು?

ರಾಮು—ನಮ್ಮಣ್ಣ ತಿರುಪತಿಗೆ ಹೋಗಿ ಬಂದರು ನೋಡಿ, ಆವಾಗ.

ಇನ್ಸ್ಪೆಕ್ಟರು—ವೈಶಾಖಮಾಸ....ಹೂ, ನಾಲ್ಕು ತಿಂಗಳಾಯಿತು. ಕೊಳ್ಳೇ ಗಾಲದ ಕಡೆಯುವರಂತೆ?

ರಾಮು—ಹೌದು. ಏನು ಇನ್ಸ್ಪೆಕ್ಟರೆ, ಅವರ ಸ್ಥಳ ಮನೆ ಎಲ್ಲಾ ವಿಚಾರಿಸಿ ಬಿಟ್ಟಿದೀರಿ?

ಇನ್ಸ್ಪೆಕ್ಟರು—(ಸ್ವಲ್ಪ ನಕ್ಕು)ಪೋಲೀಸಿನವರು ಅಂದ ಮೇಲೆ ಎಲ್ಲಾ ವಿಷಯ ಗಳನ್ನೂ ತಿಳಿದುಕೊಂಡಿರಬೇಕಯ್ಯಾ. ನಿಮ್ಮ ಜನವೋ ಅವರು?

ರಾಮು—ನಮ್ಮ ಜನವೇ ಅಂತೆ: ಅವತ್ತು ಅಣ್ಣನ ಕೈಲಿ ಅದೇನೋ ಬಾದ ರಾಯಣ ಸಂಬಂಧ ಹೇಳುತಾ ಇದ್ದರು ...ಈಗ ಸಂಧ್ಯಾವಂದನೆ ಮಾಡುತಾ ಇದಾರೇನೊ, ಕೂಗಲೇನು?

ಇನ್ಸ್ಪೆಕ್ಟರು—ಏನೂ ಬೇಡ, ನನಗೇನೂ ಅವರ ಹತ್ತಿರ ಕೆಲಸವಿಲ್ಲ ಕಾರ್ಯ ವಿಲ್ಲ. ಸುಮ್ಮನೆ ವಿಚಾರಿಸಿದೆ ಅಷ್ಟೆ.

ರಾಮು—ನೀವು ಬಂದಿದೀರಿ ಅಂತ ಹೇಳಿ ಕೂಗುತೇನೆ? ಅವರ ಕೈಲಿ ಮಾತಾ ಡುತಾ ಇದ್ದರೆ ಅಷ್ಟು ಹೊತ್ತಿಗೆ ಅಣ್ಣನೂ ಬರಬಹುದು.

ಇನ್ಸ್ಪೆಕ್ಟರು—ಬೇಡ. ಬೇಕಾದರೆ ಇನ್ನು ಯಾವತ್ತಾದರೂ ಬಂದಾಗ ನೋಡಿದರಾಯಿತು. ಅಂತೂ ಇಲ್ಲೇ ಇರುತಾರೆ ತಾನೆ ಅವರು?

ರಾಮು—ಇರದೆ ಎಲ್ಲಿ ಹೋಗುತಾರೆ! (ಇನ್ಸ್ಪೆಕ್ಟರು ಏಳುತ್ತಾನೆ)ಸ್ವಲ್ಪ ಕಾಫಿ ತಗೊಂಡು ಹೋಗಬಹುದಲ್ಲ.

ಇನ್ಸ್ಪೆಕ್ಟರು—ಇಲ್ಲವಪ್ಪ, ಬೆಳಗಿನಿಂದ ಆಗಲೇ ಎರಡು ಸಲವಾಯಿತು. ಕೆಲಸ ವಿದೆ. ಹೋಗಬೇಕು. (ಹೋಗುತ್ತಾನೆ.)

(ಸರಸ್ವತಿ ಪುನಃ ಪ್ರವೇಶಿಸುತ್ತಾಳೆ.)

ಸರಸ್ವತಿ—ಏನು ರಾಮು, ಇನ್ಸ್ಪೆಕ್ಟರು ಶಾಸ್ತ್ರಿಗಳ ವಿಷಯ ತುಂಬ ಕೇಳುತಾ ಇದ್ದರು? ಅವರಿಗೂ ಏನಾದರೂ ವೈರಾಗ್ಯದ ಹುಚ್ಚು ಹಿಡಿಯಿತೋ?

ರಾಮು—ಇನ್ಸ್ಪೆಕ್ಟರಿಗೇ? ಅವರು ಇಂಥವರ ಬಲೆಗೆಲ್ಲಾ ಬೀಳೋರಲ್ಲ ಸರಸು! ಯಾಕೆ ವಿಚಾರಿಸಿದರೋ ಏನೊ. ಅದು ಹೋಗಲಿ, ಈಗ ಮದುವೆ ವಿಷಯ ಏನು ಮಾಡುವುದು ಹೇಳು. ನಾನು ಇವತ್ತು ಆ ಶಾಸ್ತ್ರಿಗೆ ಹೇಳಿಬಿಡೋಣ ಅಂತಿದೇನೆ....

ಸರಸ್ವತಿ—ನೀನು ಸ್ವಲ್ಪ ಸುಮ್ಮನಿರು, ನೋಡೋಣ. ಇವತ್ತು....

ರಾಮು—ನನ್ನ ಕೈಲಿ ಇನ್ನು ಸುಮ್ಮನಿರುವುದಕ್ಕೆ ಆಗುವುದಿಲ್ಲ ಸರಸು. ಅಣ್ಣ ನಿಗೂ ನನಗೂ ಹಣಾಹಣಿ ಜಗಳವಾದರೂ ಸರಿ, ನಾನು ಈ ಶಾಸ್ತ್ರಿ ಯನ್ನ....

ಸರಸ್ವತಿ—ನೀನು ಯಾವಾಗಲೂ ಹೀಗೇ ರಾಮು. ಬಲು ದುಡುಕು ಸ್ವಲ್ಪ ನಿಧಾನಿಸು. ಮದುವೆ ಮಾಡುತ್ತೇನೆ ಅಂತ ಈಗ ಅಂದಿದ್ದಾನೆ ಅಣ್ಣ. ಅಂದ ಕ್ಷಣಕ್ಕೇ ಮದುವೆ ಆಗಿಯೇ ಹೋಯಿತೇ? ಎಲ್ಲಾ ನೆಟ್ಟಗಿದೆ ಅಂದುಕೊಂಡು ಏರ್ಪಾಡುಮಾಡಿದ ಮದುವೆಯೇ ಎಷ್ಟೋ ಸಲ ನಿಂತು ಹೋಗಿದೆ. ಅಂಥಾದ್ದರಲ್ಲಿ ಇದು ನಡೆಯುತ್ತೆ ಅಂತ ಏನು ಗೊತ್ತು?

ರಾಮು—ಮದುವೆ ನಡೆಯಲಿ ಬಿಡಲಿ, ಆ ರಾವಣಸನ್ಯಾಸಿಯನ್ನ ಮೊದಲು ಒದ್ದೋಡಿಸಬೇಕು. ನಾನು ಇವತ್ತು ಕೇಳಿಯೇ ಬಿಡುತ್ತೇನೆ. ಒಳ್ಳೆಯ ಮಾತಿನಿಂದ ತೊಲಗುತೀಯೋ ಇಲ್ಲವೋ ಅಂತ

ಸರಸ್ವತಿ—ನೀನು ತಾಳಪ್ಪ ಸ್ವಲ್ಪ ಚಿಕ್ಕಮ್ಮ ಅವರ ಕೈಲೂ ಅಣ್ಣನ ಕೈಲೂ ಮಾತಾಡುತ್ತೇನೆ ಅಂದಿದ್ದಾಳೆ ಈಗ ಅವರನ್ನ ಬರಹೇಳಿಕಳುಹಿಸಿ, ಮನೆ ಯಲ್ಲಿ ಈ ಮದುವೆ ಒಬ್ಬರಿಗೂ ಸ್ವಲ್ಪವೂ ಇಷ್ಟವಿಲ್ಲ ಅಂತ ಅವರಿಗೆ ಹೇಳಬೇಕು ಅಂತಿದ್ದಾಳೆ. ಅವರೇನಾದರೂ ಆ ಮಾತು ಕೇಳಿ ಒಪ್ಪಿ ಕೊಂಡರೆ ಬದುಕಿದ ಹಾಗಾಯಿತು. ಇನ್ನೇನು ಅವರು ಬರುತ್ತಾರೆ. ನೀನು ಹೋಗು, ನಾನು ಇಲ್ಲೇ ಇರುತ್ತೇನೆ.

ರಾಮು—ಯಾಕೆ? ನಾನಿದ್ದರೇನು?

ಸರಸ್ವತಿ—ಬೇಡ, ನೀನಿಲ್ಲದೇ ಇದ್ದರೇ ವಾಸಿ.

ರಾಮು—ಇಲ್ಲ, ನಾನೇನೂ ಅವರ ಮಾತಿಗೆ ಮಧ್ಯೆ ಮಾತು ಹಾಕುವುದಿಲ್ಲ.

ಸರಸ್ವತಿ—ಇಲ್ಲ ಕಣೋ. ನೀನು ರೇಗಿಬಿಟ್ಟು ಏನಾದರೂ ಅಂದುಬಿಡುತೀಯೆ. ಸುಮ್ಮನೆ ಹೋಗಪ್ಪ ನೀನು.

ರಾಮು—ಇಲ್ಲ, ನಾನು ಕೋಪಮಾಡಿಕೊಳ್ಳುವುದಿಲ್ಲ ಸುಮ್ಮನೆ ಕೂತಿರು ತ್ತೇನೆ.

ಸರಸ್ವತಿ—ಹೋಗು ಅಂದರೆ ಹೋಗುವುದಿಲ್ಲ ನೀನು. ಅಗೋ ಶಾಸ್ತ್ರಿಗಳು ಬಂದರು ಅಂತ ಕಾಣುತ್ತೆ. ಈ ಚಿಕ್ಕಮನೆಯಲ್ಲಿ ಕೂತುಕೋ ಹೋಗು ನೀನು.

(ಸರಸ್ವತಿ ಬಲಾತ್ಕಾರವಾಗಿ ರಾಮುವನ್ನು ಚಿಕ್ಕ ಮನೆಯೊಳಕ್ಕೆ ಕಳುಹಿಸುತ್ತಾಳೆ. ಸುಬ್ಬಾಶಾಸ್ತ್ರಿ ಪ್ರವೇಶಿಸುತ್ತಾನೆ. ಅವನಿಗೆ ಸುಮಾರು ನಲವತ್ತು ವರ್ಷ. ಸ್ವಲ್ಪ ಶ್ಯಾಮಲವರ್ಣದವನಾದರೂ ನೋಡುವುದಕ್ಕೆ ಲಕ್ಷಣವಾಗಿಯೇ ಇದಾನೆ. ವೈದಿಕರಂತೆ ಶುಭ್ರವಾದ ಮೇಲುಕೋಟೆ ಪಂಚೆಯನ್ನುಟ್ಟು ಶಾಲು ಹೊದ್ದಿದಾನೆ, ಕಿವಿಯಲ್ಲಿ ಹತ್ತು ಕಡಕು. ಕತ್ತಿನಲ್ಲಿ ಚಿನ್ನದ ತಂತಿಯಿಂದ ಬಿಗಿದು ಮಧ್ಯದ ಮಣಿಗೆ ಚಿನ್ನದ ಕಟ್ಟು ಹಾಕಿರುವ ರುದ್ರಾಕ್ಷಿಸರ. ಹಣೆಗೆ ಮೂರೆಳೆ ವಿಭೂತಿ; ಹುಬ್ಬುಗಳ ನಡುವೆ ಕುಂಕುಮ.)

ಸುಬ್ಬಾಶಾಸ್ತ್ರಿ—(ಸರಸ್ವತಿಯನ್ನು ಕಂಡೊಡನೆ ಮನೆಯೊಳಗಿರುವ ತನ್ನ ಶಿಷ್ಯನನ್ನು ಕುರಿತು)ಶಿವ, ನನ್ನ ಪಾರಾಯಣದ ಪುಸ್ತಕ ಅದನ್ನೆಲ್ಲಾ ತೆಗೆದಿಡಪ್ಪ. ಯಾರಾದರೂ ನನ್ನ ನೋಡಬೇಕು ಅಂತ ಬಂದರೆ ದೇವರ ದರ್ಶನಕ್ಕೆ ಹೋಗಿದಾರೆ ಅಂತ ಹೇಳು....ಶ್ರೀರಾಮ, ಶ್ರೀರಾಮ.... (ಸರಸ್ವತಿಯ ಕಡೆ ತಿರುಗಿ) ಏನಮ್ಮ ಸರಸ್ವತಿ, ನಿಮ್ಮ ಚಿಕ್ಕಮ್ಮ ಹೇಳಿ ಕಳುಹಿಸಿದರಂತೆ?

ಸರಸ್ವತಿ—ನಿಮ್ಮ ಕೈಲಿ ಏನೋ ..

ಸುಬ್ಬಾಶಾಸ್ತ್ರಿ—ಸರಸ್ವತಿ, ಹಾಗೆ ಕತ್ತೆತ್ತಿಕೊಂಡು ನಾಚಿಕೆಯಿಲ್ಲದೆ ಮಾತಾಡಬಾರದಮ್ಮ. ಹೆಂಗಸರಿಗೆ ಮಾತಿನಲ್ಲಿ ವಿನಯ, ಲಜ್ಜೆ, ಇದ್ದಿರಬೇಕು. ನಿನ್ನ ಕೈಲಿ ಮಾತಾಡುವುದಕ್ಕೆ ಇಷ್ಟವಿಲ್ಲ ನನಗೆ.

ಸರಸ್ವತಿ—(ಅವನ ಕಡೆ ತಿರುಗದೆಯೇ, ಸಿಟ್ಟಿನಿಂದ) ನೀವು ಮಾತಾಡಲಿ ಅಂತಿರೋರು ಯಾರು! ಚಿಕ್ಕಮ್ಮ ನಿಮ್ಮನ್ನ ಏನೋ ಕೇಳಬೇಕಂತೆ.

ಸುಬ್ಬಾಶಾಸ್ತ್ರಿ—ನನ್ನಿಂದ ಏನು ಕೆಲಸವಾಗಬೇಕಾದರೂ ಆಗಬಹುದು. ಆಕೆ ಜಾಗ್ರತೆ ಬರುತಾರೋ? ನಾನು ದೇವಸ್ಥಾನಕ್ಕೆ ಹೋಗಬೇಕು ಅಂತ ಹೊರಟಿದೇನೆ

ಸರಸ್ವತಿ—ಇನ್ನೇನು ಬರುತಾರೆ. ಅಗೋ ಬಂದರು.

(ಸರಸ್ವತಿ ಹೊರಟುಹೋಗುತ್ತಾಳೆ. ಶಾರದೆ ಪ್ರವೇಶಿಸುತ್ತಾಳೆ.)

ಸುಬ್ಬಾಶಾಸ್ತ್ರಿ—(ಮರ್ಯಾದೆಯಿಂದ)ನನ್ನ ಕೈಲಿ ಏನೋ ಮಾತಾಡಬೇಕು ಅಂತ ಹೇಳಿ ಕಳುಹಿಸಿದಿರಂತೆ?

ಶಾರದೆ—ಹೌದು. ಕೂತುಕೊಳ್ಳಿ.

ಸುಬ್ಬಾಶಾಸ್ತ್ರಿ—ಮೈಯಲ್ಲಿ ಸ್ವಸ್ಥವಿರಲಿಲ್ಲನಲ್ಲ? ಈಗ ಸ್ವಲ್ಪ ವಾಸಿಯೆ?

ಶಾರದೆ—ವಾಸಿ. ಜ್ವರ ನಿಂತು ಎರಡು ದಿನವಾಯಿತು

ಸುಬ್ಬಾಶಾಸ್ತ್ರಿ—ಭಗವಂತನ ದಯೆ. ಬೇಗ ವಾಸಿಯಾಗಲಿ ಅಂತ ನಿತ್ಯ ಪ್ರಾರ್ಥಿಸುತಾ ಇದ್ದೆ.

ಶಾರದೆ— ನನಗಾಗಿ ನೀವು ಪ್ರಾರ್ಥನೆ ಮಾಡುವುದು ಅಂದರೇನು?

ಸುಬ್ಬಾಶಾಸ್ತ್ರಿ— ನಿಮಗಾಗಿ ಪ್ರಾರ್ಥನೆ ಮಾಡುವುದು ಹೆಚ್ಚೆ !

ಶಾರದೆ—ನಾನು ನಿಮ್ಮಲ್ಲಿ ಒಂದು ವಿಷಯ ಮಾತಾಡಬೇಕಾಗಿತ್ತು.

ಸುಬ್ಬಾಶಾಸ್ತ್ರಿ—ಬಹಳ ಸಂತೋಷ. ನಾನೂ.... ಮಾತಾಡಬೇಕು ಅಂತ ಬಹಳ ಮನಸ್ಸು (ಅವಳ ಕಡೆ ಸ್ವಲ್ಪ ನೋಡಿ ಮತ್ತೆ ದೃಷ್ಟಿಯನ್ನು ಬೇರೆ ಕಡೆ ತಿರುಗಿಸುತ್ತಾನೆ)

ಶಾರದೆ—(ಸ್ವಲ್ಪ ಅನವಧಾನದಿಂದ) ನಾನು ಹೇಳಬೇಕು ಅಂತಿದ್ದದ್ದು ಇದು: ನಮ್ಮ ಲಲಿತನ್ನ ಅನಂತನಿಗೆ ಕೊಟ್ಟು ಮದುವೆ ಮಾಡಬೇಕು ಅಂತಿದ್ದರು. ಈಗೇನೋ ಅವರು ಮನಸ್ಸು ಬದಲಾಯಿಸಿ ನಿಮಗೆ ಕೊಡಬೇಕು ಅಂತ....

ಸುಬ್ಬಾಶಾಸ್ತ್ರಿ—ಶಂಕರಪ್ಪ ನನಗೆ ಆ ವಿಚಾರ ಹೇಳಿದ. ನಾನು ಅದಕ್ಕೆ....

ಶಾರದೆ—ನೀವು ಅದಕ್ಕೆ ಒಪ್ಪಲಾರಿರಿ ಅಂತಲೇ ಅಂದುಕೊಂಡೆ. ಪ್ರಪಂಚದ ಹಂಬಲನ್ನೇ ಬಿಟ್ಟವರಿಗೆ ಸಂಸಾರದಲ್ಲಿ ಸಿಕ್ಕಿ ತೊಳಲುವುದಕ್ಕೆ ಮನಸ್ಸು ಬರುತ್ತೆಯೆ?

ಸುಬ್ಬಾಶಾಸ್ತ್ರಿ—ಎಷ್ಟಾದರೂ ನಾನು ಮನುಷ್ಯನೇ ಅಲ್ಲವೇ? ನಾನು ಪ್ರಪಂಚವನ್ನು ಬಿಡುತ್ತೇನೆ ಅಂದರೂ ಪ್ರಪಂಚ ನನ್ನ ಬಿಡಬೇಕಲ್ಲ! ನಾವು ಎಷ್ಟು ಬೇಡ ಅಂದರೂ ಐಹಿಕ ಸುಖ ನಮ್ಮನ್ನು ಸೆಳೆಯುತ್ತೆ. ಆ ಬಂಧನ ಬಿಡಿಸಿ ಕೊಳ್ಳುವುದು ಎಲ್ಲರಿಗೂ ಸಾಧ್ಯವಲ್ಲ.

ಶಾರದೆ—ಆದರೆ ನೀವು ಎಲ್ಲರ ಹಾಗಲ್ಲ. ಈ ಪ್ರಪಂಚದ ಸುಖವೆಲ್ಲಾ ಮಾಯೆ ಅಂತ ತಿಳಿದು ಸದಾ ದೇವರ ಧ್ಯಾನದಲ್ಲೇ ಕಾಲಕ್ಷೇಪ ಮಾಡುತೀರಿ.

ಸುಬ್ಬಾಶಾಸ್ತ್ರಿ—ನಿಜವಾಗಿ ವಿಚಾರಮಾಡಿ ನೋಡಿದರೆ, ಮಾಯೆ ಅಂದರೇನು? ಸತ್ಯ ಯಾವುದು? ಮಿಥ್ಯ ಯಾವುದು? ಈಗ ನಿಮ್ಮ ಸೌಂದರ್ಯ—ಸ್ತ್ರೀಯರ ಸೌಂದರ್ಯ—ಭಗವಂತನೇ ಸೃಷ್ಟಿಸಿರುವ ಸೌಂದರ್ಯ—ಅದನ್ನು ಮಿಥ್ಯ ಅನ್ನಬಹುದೆ? ಅದು ಮಾಯೆಯೆ? ದೇವರ ಧ್ಯಾನದಲ್ಲಿ ಆಸಕ್ತಿಯಿದ್ದ ಮಾತ್ರಕ್ಕೆ ಈ ಸೌಂದರ್ಯದ ವಿಷಯದಲ್ಲಿ ನಮಗೆ ಬಯಕೆಯಾಗುವುದಿಲ್ಲವೆ? ಸ್ವರ್ಗವನ್ನು ಸಾಧಿಸಬೇಕು ಅನ್ನುವುದು

ಯೋಗಿಗಳ ಆಸೆ; ಆ ಸ್ವರ್ಗವೇ ಭೂಮಿಗೆ ಇಳಿದು ಬಂದಿದೆಯೋ ಅನ್ನಿಸುವ ಸೌಂದರ್ಯವನ್ನು ನೋಡಿದರೆ, ಶಾರದೆ, (ಹೆಸರು ಹಿಡಿದುಕೂಗಿದಾಗ ಶಾರದೆ ಅಸಮಾಧಾನವನ್ನು ಸೂಚಿಸುತ್ತಾಳೆ.) ಅದಕ್ಕೆ ನಾವು ಸೆರೆಯಾಗುವುದು ಹೆಚ್ಚೆ? ಅಂಥ ಸೌಂದರ್ಯವನ್ನು ಆರಾಧಿಸುವುದು ಭಗವಂತನ ಆರಾಧನೆ ಅಂತಲೇ ತಿಳಿದಿದ್ದೇನೆ. ದೇವರು ಸೌಂದರ್ಯಸ್ವರೂಪನೇ ಅಲ್ಲವೆ? ಸ್ತ್ರೀಯರ ಲಾವಣ್ಯ ಆ ಸೌಂದರ್ಯದ ಬೆಳಕು. ಆ ಲಾವಣ್ಯಕ್ಕೆ ಸೋತು ಆಸೆಪಡುವುದು ತಪ್ಪೇ?..........ನಾನು........

ಶಾರದೆ—(ಸಿಟ್ಟಿನಿಂದ) ಏನಿದು ನೀವು ಹೇಳುವುದು? (ಸ್ವಲ್ಪ ಸಿಟ್ಟನ್ನಡಗಿಸಿಕೊಂಡು) ನಿಮ್ಮಂಥವರು, ಇಹಲೋಕದ ವ್ಯಾಪಾರವನ್ನೇ ಬಿಟ್ಟವರು—ಹೀಗೆ ವ್ಯಾಮೋಹಕ್ಕೆ ಕಟ್ಟುಬೀಳುವುದುಂಟೆ? ಈ ವಯಸ್ಸಿನಲ್ಲಿ ಚಿಕ್ಕಪುಟ್ಟ ಹುಡುಗಿ ಲಲಿತನ್ನ ಕಟ್ಟಿಕೊಂಡು, ಸಂಸಾರ ಹೂಡಿ...........

ಸುಬ್ಬಾಶಾಸ್ತ್ರಿ—ಮನಸ್ಸನ್ನು ಸಂಪೂರ್ಣವಾಗಿ ಜಯಿಸುತೇನೆ ಅನ್ನುವುದು ಬರಿಯ ಭ್ರಾಂತಿ. ಮನುಷ್ಯಮಾತ್ರದವನಿಗೆ ಸಾಧ್ಯವಲ್ಲ ಅದರಲ್ಲೂ.... ಜಗತ್ತನ್ನೇ ಮರಳುಮಾಡುವಂಥ ಸೌಂದರ್ಯವನ್ನು ಎದುರಿಸುವುದಕ್ಕೆ ಯಾರಿಗೆ ತಾನೆ ಸಾಧ್ಯ? (ದೇಶಾವಾರದ ನಗೆಯನ್ನು ನಗುತ್ತಾ ಅವಳ ಕಡೆಯೇ ದಿಟ್ಟಿಸಿನೋಡುತ್ತಾನೆ )

ಶಾರದೆ—(ಸಂದೇಹದಿಂದಲೂ ಕೋಪದಿಂದಲೂ) ಇದೇನು ಹೀಗೆ ನೋಡುತೀರಿ?

ಸುಬ್ಬಾಶಾಸ್ತ್ರಿ—ನೀನು ಉಟ್ಟಿರುವ ಸೇರೆ ಎಷ್ಟು ಸೊಗಸಾಗಿದೆ ಅಂತ ನೋಡತಾ ಇದ್ದೆ ಆ ರೇಷ್ಮೆ ಮಿರಮಿರನೆ ಮಿಂಚುತಾ ಇದೆ. ನಿನ್ನ ಸೌಂದರ್ಯಕ್ಕೆ ಒಪ್ಪುವಂಥ ಸೀರೆ.

ಶಾರದೆ—ಈಗ ಸೀರೆಯ ಮಾತೇಕೆ! ಈ ಮದುವೆ ನಮ್ಮ ಮನೆಯಲ್ಲಿ ಯಾರಿಗೂ ಇಷ್ಟವಿಲ್ಲ. ....

ಸುಬ್ಬಾಶಾಸ್ತ್ರಿ—ನನಗೂ ಇಷ್ಟವಿಲ್ಲ. ಶಾರದೆ, ನನ್ನ ಮನಸ್ಸಿನಲ್ಲಿರುವುದನ್ನು ಹೇಳಿಬಿಡುತ್ತೇನೆ. ನಿನ್ನ ರೂಪವನ್ನು ನೋಡಿದಾರಭ್ಯ ನಾನು ನಿನ್ನ ಬಂದಿಯಾಗಿ ಹೋಗಿದೇನೆ. ಈಗ ನನ್ನ ಮನಸ್ಸನ್ನು ಗಟ್ಟಿಮಾಡಿಕೊಳ್ಳಬೇಕು ಅಂದರೆ ಸಾಧ್ಯವಿಲ್ಲ. ಅದು ನಿನ್ನಲ್ಲಿ ಸೇರಿಹೋಗಿದೆ.

ಶಾರದೆ—(ಬಹು ಕೋಪದಿಂದ) ಏನಂದಿರಿ, ನಿಮಗೇನು ಬುದ್ಧಿ........

ಸುಬ್ಬಾಶಾಸ್ತ್ರಿ—ಇದರಲ್ಲೇನು ತಪ್ಪಿದ್ದರೂ ನನ್ನದಲ್ಲ, ಶಾರದೆ, ನಿನ್ನ ಸೌಂದ

ರ್ಯದ್ದು. ಈಗ ನಾನು ಸದಾ ನಿನ್ನ ಧ್ಯಾನದಲ್ಲೆ.......

ಶಾರದೆ—(ಕಿಡಿಕಿಡಿಯಾಗಿ) ಸಾಕು ಸುಮ್ಮನಿರಿ. ನಿಮ್ಮ ನಡತೆ ನೋಡಿ ಸ್ವಲ್ಪ ಅನುಮಾನ ಬಂದರೂ ನೀವು ಇಷ್ಟು ಕೆಟ್ಟಿರಲಾರಿರಿ ಅಂತಿದ್ದೆ. ಕೆಟ್ಟಿದ್ದರೂ ಈ ಮನೆಯಲ್ಲಿ ನನ್ನೆದುರಿಗೆ ಹೀಗೆಲ್ಲಾ ಮಾತಾಡುವಷ್ಟು ದಿಟ್ಟತನವಿರಲಾರದು ಅಂತಿದ್ದೆ. ಅವರು ಬರುತ್ತಲೆ .. (ಎನ್ನುತ್ತಾ ಮನೆಯ ಒಳಬಾಗಿಲಿನ ಕಡೆಗೆ ಹೋಗುವಳು. ಸುಬ್ಬಾಶಾಸ್ತ್ರಿಯೂ ಅದೇ ಕಡೆ ಒಂದು ಹೆಜ್ಜೆ ಬರುವನು. ಶಾರದೆ ಅಪ್ರತಿಭಳಾಗಿ ನಿಲ್ಲುವಳು.)

ಸುಬ್ಬಾಶಾಸ್ತ್ರಿ—ಹಾಗಾದರೆ ನಿನ್ನ ಹೃದಯ ಅಷ್ಟು ಕಠಿನವಾದದ್ದೆ? ಲೋಕದಲ್ಲಿ ಸ್ತ್ರೀವ್ಯಾಮೋಹವನ್ನು ಜಯಿಸಿದವರು ಯಾರಿದ್ದಾರೆ? ಶಾರದೆ, ನಾನೇನು ಕುರುಡನೇ, ನಿನ್ನ ಸೌಂದರ್ಯದ ಪಾಶಕ್ಕೆ ಸಿಕ್ಕದಿರುವುದಕ್ಕೆ?

ಶಾರದೆ—ನಿಮಗೆ ಮೈಮೇಲೆ ಪ್ರಜ್ಞೆಯಿರುವ ಹಾಗಿಲ್ಲ. ದಾರಿಬಿಡಿ!(ಮತ್ತೆ ಒಳಬಾಗಿಲಿನ ಕಡೆಗೆ ಹೋಗುತ್ತಾಳೆ. ಶಾಸ್ತ್ರಿ ದಾರಿಯಲ್ಲೇ ನಿಂತಿದ್ದಾನೆ. ಶಾರದೆ ಗಾಬರಿಗೊಂಡು ಕೂಗುತ್ತಾಳೆ.) ಸೆಸು! ರಾಮು!

(ಕೋಪದಿಂದ ಹಲ್ಲು ಕಡಿಯುತ್ತಾ ರಾಮು ಪ್ರವೇಶಿಸುತ್ತಾನೆ)

ರಾಮು—(ಶಾಸ್ತ್ರಿಯನ್ನು ಹಿಡಿದೆಳೆದು)—ನಾನು ಇಲ್ಲೇ ಇದ್ದೆ ಚಿಕ್ಕಮ್ಮ. ಇವನ ಮಾತೆಲ್ಲಾ ಕೇಳಿದೆ. (ಶಾಸ್ತ್ರಿಯನ್ನು ಬಲವಾಗಿ ತಳ್ಳಿ ಮತ್ತೆ ರಟ್ಟೆಯನ್ನು ಹಿಡಿದೆಳೆದುಕೊಂಡು) ಹೊರಡು ಸೂಳೇಮಗನೆ! ಅಣ್ಣ ಬರುತ್ತಲೆ ಹೇಳಬೇಕು, ಎಂಥ ವಿಷಸರ್ಪವನ್ನ ಸಾಕುತಾ ಇದ್ದ ಅಂತ! ಅಬ್ಬ! ಎಷ್ಟು ಧೈರ್ಯವೋ ನಿನಗೆ.......

ಶಾರದೆ—ರಾಮು, ಇನ್ನು ಇದನ್ನ ಗದ್ದಲ ಹತ್ತಿಸಬೇಡ. ಊರಿಗೆಲ್ಲ ಹರಡೀತು ಇವನ್ನ ಹೊರಡಿಸಿದರೆ ಸಾಕು. ಹೆಚ್ಚು ಗಲಾಟೆಯಾದರೆ ಊರಿನವರೆಲ್ಲರ ಬಾಯಲ್ಲೂ ನಮ್ಮ ಮಾತೇ ಆಗುತ್ತೆ.

ರಾಮು—ಈ ಗುಟ್ಟೆಲ್ಲಾ ನನಗೆ ಸರಿಬೀಳೋದಿಲ್ಲ ಚಿಕ್ಕಮ್ಮ! ಇವನು ದೊಡ್ಡ ಯೋಗಿ! ಋಷಿ! ತನಗೊಬ್ಬನಿಗೇ ಸ್ವರ್ಗ ಅಂತ ಕೊಚ್ಚಿಕೊಳ್ಳುತ್ತಾ ಇದ್ದವನು! ಈ ಶನಿ ಕಾಲಿಟ್ಟ ಘಳಿಗೆಯಿಂದ ನಮ್ಮ ಮನೆಯಲ್ಲಿ ಒಂದೂ ನೆಟ್ಟಗಿಲ್ಲ. ಇವನ ಬಣ್ಣ ಈಗ ಹೊರಕ್ಕೆ ಹಾಕದೆ ಇದ್ದರೆ ಇನ್ನು ಇಂಥ ಸಮಯ ಸಿಕ್ಕುತ್ತೆಯೆ!

ಶಾರದೆ—ಹಾಗಲ್ಲಪ್ಪ ರಾಮು ....

ರಾಮು—ಇಲ್ಲ ಚಿಕ್ಕಮ್ಮ, ನನ್ನ ತಡೆಯುವುದಕ್ಕೆ ಬರಬೇಡ. ಕೈಗೆ ಸಿಕ್ಕಿದಾನೆ, ಈಗ ಹಾಕಿ ಅರೆಯದೆ ಇದ್ದರೆ ತಿರುಗಿ ಸಿಕ್ಕುತಾನೆಯೆ ಇವನು! ಇಗೋ ಅಣ್ಣ ಬಂದ. ಒಳ್ಳೇ ಸಮಯಕ್ಕೇ ಬಂದ ಹಾಗಾಯಿತು. (ಶಂಕರಪ್ಪ ಪ್ರವೇಶಿಸುತ್ತಾನೆ) ಅಣ್ಣ, ಇಷ್ಟುದಿನ ಈ ಶಾಸ್ತ್ರಿಯನ್ನ ಮನೆಯಲ್ಲಿಟ್ಟುಕೊಂಡು ಉಪಚಾರ ಮಾಡಿದ್ದಕ್ಕೆ ನಿನಗೆ ಸರಿಯಾಗಿ ಪ್ರತಿಫಲ ಸಿಕ್ಕಿದೆ. ನಿನ್ನ ಕಂಡರೆ ಪ್ರೀತಿ ಅಂತ ಹೇಳಿಕೊಳ್ಳುತಾ ಇದ್ದನಲ್ಲ, ಆ ಪ್ರೀತಿ ಈಗ ಚಿಕ್ಕಮ್ಮನ ಮೇಲೆ ತಿರುಗಿದೆ! ಈಗ ನಾನು ಕೇಳುತಾ ಇದ್ದ ಹಾಗೇ ಹೇಳುತಿದ್ದ. ಚಿಕ್ಕಮ್ಮ ನಿನ್ನ ಕೈಲಿ ಹೇಳಿದರೆ ದೊಡ್ಡ ರಂಪವಾದೀತು, ಸುಮ್ಮನಿರು, ಅಂದಳು. ನಾನು ಇವನಿಗೆ ತಕ್ಕ ಶಿಕ್ಷೆಮಾಡದೆ ಇದ್ದರೆ ಸರಿಯಲ್ಲ ಅಂತ.... ..

ಶಾರದೆ—ಸುಮ್ಮನೆ ಊರಿಗೆಲ್ಲ ಹರಡಬೇಡಿ ಅಂದರೆ. ಅವನಿಗೆ ಏನು ಶಾಸ್ತಿ ಮಾಡಬೇಕೋ ಗಲಾಟೆಯಿಲ್ಲದೆ ಮಾಡಿಬಿಡಿ. ನನ್ನ ಹೆಸರು ಬೀದಿಗೆ ಎಳೆಯಬೇಡಿ. (ಹೊರಟುಹೋಗುತ್ತಾಳೆ.)

ಶಂಕರಪ್ಪ—(ಮೂಗು ಹಿಡಿದವನಂತೆ ನಿಂತಿದ್ದನು) ಶಾಸ್ತ್ರಿ! ಹೀಗೂ ಉಂಟೆ! ಲೋಕದಲ್ಲಿ ಇನ್ನು ಯಾರನ್ನ ನಂಬುವುದು!........ಇರಲಾರದು........ ಎಂದಿಗೂ ........

ಸುಬ್ಬಾಶಾಸ್ತ್ರಿ—ಹೌದು ಶಂಕರ, ನಾನು ನೀಚ ನನ್ನಂಥ ಪಾಪಿ ಈ ಲೋಕದಲ್ಲಿ ಇನ್ನೊಬ್ಬನಿಲ್ಲ. ಹಿಂದೆ ಪಾಪದ ಗಂಟು ಕಟ್ಟಿ ಇಟ್ಟುಕೊಂಡು ಈಗ ಹೊರುವುದಿಲ್ಲ ಅಂದರೆ ಆಗುತ್ತೆಯೆ? ಹಿಂದೆ ನಾನು ಯಾರ ಮೇಲೆ ಸುಳ್ಳು ಅಪವಾದ ಹೊರಿಸಿದ್ದೆನೋ, ಈಗ ನನ್ನ ಮೇಲೆ ಅಪವಾದ ಬಂದಿದೆ. ನನ್ನ ಮೇಲೆ ಏನು ದೂರಾದರೂ ಬರಲಿ, ನಾನು ಇಲ್ಲ ಅಂತ ಕೂಡ ಹೇಳುವುದಿಲ್ಲ. ನನ್ನ ಪೂರ್ವದ ದುಷ್ಕರ್ಮದ ಫಲ ಆದಷ್ಟು ಬೇಗ ಸವೆಯಲಿ ರಾಮು, ನಿನ್ನ ಹೆಂಡತಿ-ಇವರು ಹೇಳಿದ್ದೆಲ್ಲಾ ನಿಜ ಅಂತಲೇ ಭಾವಿಸಿಕೊ. (ಶಂಕರಪ್ಪ ರಾಮುವಿನ ಕಡೆ ನೋಡುತ್ತಾನೆ. ರಾಮು ಸುಬ್ಬಾಶಾಸ್ತ್ರಿಯನ್ನು ದುರುಗುಟ್ಟಿಕೊಂಡು ನೋಡುತ್ತಾ ಹಲ್ಲು ಕಡಿಯುತ್ತಿರುವನು.) ಕಳ್ಳ ಅಂತ ಮನೆಯಿಂದ ನನ್ನ ಹೊರಡಿಸು. ನನಗೇನೂ ಕೋಪವಿಲ್ಲ. ನನ್ನ ಮೇಲೆ ಅಪವಾದ ತರುವವನು ರಾಮುವಲ್ಲ. ನನ್ನ ಪೂರ್ವಾರ್ಜಿತ ಕರ್ಮ! ಈಗ ನೀನು ಶಿಕ್ಷೆ ಕೊಟ್ಟರೆ ಅದು ನನ್ನ

ಕರ್ಮಕ್ಕೆ ಪ್ರಾಯಶ್ಚಿತ್ತ.

ಶಂಕರಪ್ಪ—(ಅನುಮಾನದಿಂದ ಸುಬ್ಬಾಶಾಸ್ತ್ರಿಯ ಕಡೆಗೂ ಮತ್ತೆ ರಾಮುವಿನ ಕಡೆಗೂ ನೋಡಿ, ಸ್ವಗತ)ಮನೆಯಲ್ಲಿ ಇವರೊಬ್ಬರಿಗೂ ಶಾಸ್ತ್ರಿಯನ್ನು ಕಂಡರೆ ಆಗುವುದಿಲ್ಲ. ಎಲ್ಲಾ ಸೇರಿ ಈ ತಂತ್ರ ಮಾಡಿದಾರೊ! (ಗಟ್ಟಿಯಾಗಿ)ಏನೋ ನಡೆದ ವಿಚಾರ, ರಾಮು?ಏನು, ಶಾಸ್ತ್ರಿ, ವಿಚಾರ?

ಸುಬ್ಬಾಶಾಸ್ತ್ರಿ—ಶಾರದಮ್ಮ ಏನೋ ಸ್ವಲ್ಪ ಮಾತನಾಡಬೇಕು ಅಂತ ಹೇಳಿ ಕಳುಹಿಸಿದ್ದರು. ಲಲಿತೆಯನ್ನ ನನಗೆ ಕೊಟ್ಟು ಮದುವೆ ಮಾಡುವುದು ಯಾರಿಗೂ ಇಷ್ಟವಿಲ್ಲ ಅಂದರು. ಹಾಗಂದ ಮೇಲೆ ನನಗೂ ಬೇಕಿಲ್ಲ ಅಂತ.... ಈ ಚರ್ಚೆಯೆಲ್ಲಾ ಯಾಕೆ, ಶಂಕರ, ನನ್ನ ಪಾಡಿಗೆ ನಾನು ಹೊರಟುಹೋದರೆ ಕ್ಷೇಮ.

ಶಂಕರಪ್ಪ—(ತನಗೆ ತಾನೇ, ಗಟ್ಟಿಯಾಗಿ) ಹೂಂ, ಮದುವೆ ಯಾರಿಗೂ ಇಷ್ಟ ವಿಲ್ಲ! ನನಗೆ ಇಷ್ಟವಾದ್ದು ಯಾರಿಗೂ ಇಷ್ಟವಿಲ್ಲ. ಈ ಮನೆಯಲ್ಲಿ!

ರಾಮು—ಅಷ್ಟೇ ಅಲ್ಲ, ಅಣ್ಣ, ಆ ಮೇಲೆ ಏನಂದ ಕೇಳು.

ಶಾಸ್ತ್ರಿ—(ಅಂತರಿಕ್ಷವನ್ನು ನೋಡುತ್ತಾ) ನಾನಂದದ್ದೇನು. ಇವನು ಹೇಳು ವುದೇನು! ಮದುವೆ ಬೇಡದ ಮಾತ್ರಕ್ಕೆ....ಛೀ, ನಾನು ಇವರನ್ನು ದೂರಬಾರದು, ತಪ್ಪು ಅವರದ್ದಲ್ಲ.

ರಾಮು—ಲೋ, ಆಷಾಢಭೂತಿ........

ಶಂಕರಪ್ಪ—ಛೀ, ಕುಲಗೇಡಿ, ನಾಲಿಗೆ ಬಿಗಿಹಿಡಿ, ದೇವರಂಥ ಮನುಷ್ಯನ ಮೇಲೆ ಹೀಗೆ ಸುಳ್ಳು ಹುಟ್ಟಿಸಿಕೊಂಡು ಆಡುವುದೆ!

ರಾಮು—ಏನಣ್ಣ, ಇವನ ಕಪಟಕ್ಕೆ ಬೆರಗಾಗಿ ನಾನು ಕಣ್ಣಾರ........

ಶಂಕರಪ್ಪ—ಥೂ ನಾಯಿ, ಬಾಯಿ ಮುಚ್ಚು!

ಸುಬ್ಬಾಶಾಸ್ತ್ರಿ—ಶಂಕರ, ಹಾಗೆ ಕೋಪಮಾಡಬಾರದು ನಾನು ಎಷ್ಟುದಿನ ಹೇಳಿದರೂ ನೀನು ಇನ್ನೂ ಕೋಪ ಬಿಟ್ಟಿಲ್ಲ...ಬಿಟ್ಟಿಲ್ಲ. ಕೋಪ ಅನ್ನು ವುದು ಬಹಳ ಅನರ್ಥಕ್ಕೆ ಕಾರಣ. ನೀನು ನನ್ನ ಕಡೆಗೆ ಯಾಕೆ ವಹಿಸಿ ಕೊಂಡು ಬರುತೀಯೆ? ಈಗ ರಾಮು ಹೇಳಿದ್ದು ಸುಳ್ಳು ಅಂತ ನಾನು ಅಂದೆ ಅನ್ನು. ಅದರಿಂದ ಏನು ನಿಶ್ಚಯವಾದ ಹಾಗಾಯಿತು? ಅವನ ಮಾತೇ ನಿಜವಿರಬಾರದೇನು? ನೀನು ನನ್ನ ಬಾಹ್ಯಚರ್ಯೆ ನೋಡಿ ನಾನು ಸಭ್ಯ ಅಂದುಕೊಂಡಿದೀಯೆ. ಅದೆಲ್ಲ ಬರಿಯ ಆಡಂಬರವಿರ

ಬಾರದೇನು? ಲೋಕದಲ್ಲಿ ಗೋಮುಖ ವ್ಯಾಘ್ರಗಳು ಎಷ್ಟಿಲ್ಲ? ನೀನು ಮುಖ ನೋಡಿ ಮೋಸಹೋಗಬಾರದು. ನಾನು ಪಾಪಿ. ಜನಗಳೇನೋ ಒಳ್ಳೆಯವನು ಅಂದುಬಿಟ್ಟರಾಯಿತೆ? (ರಾಮುವಿಗೆ) ನಿನ್ನದೇನೂ ತಪ್ಪಿಲ್ಲ ರಾಮು. (ರಾಮುವಿನ ಬೆನ್ನ ಮೇಲೆ ಕೈ ಇಡಲು ಹೋಗುತ್ತಾನೆ. ರಾಮು ಅವನ ಕೈಯನ್ನು ತೆಗೆದು ಒಗೆಯುತ್ತಾನೆ.) ನನ್ನ ಕರ್ಮ ನಿನ್ನ ಕೈಲಿ ಈ ಮಾತಾಡಿಸುತಾ ಇದೆ. ಇದರಲ್ಲಿ ಅನ್ಯಾಯವೇನೂ ಇಲ್ಲ. ನಾನು ಹಿಂದೆ ಮಾಡಿದ್ದಕ್ಕೆ ಈಗ ಶಿಕ್ಷೆ ಅನುಭವಿಸುತಾ ಇದೇನೆ, ಅಷ್ಟೆ.

ಶಂಕರಪ್ಪ—ಅಯ್ಯೋ, ಇಂಥ ಸಾಧುವಿನ ಮೇಲೆ ಈ ಅಪವಾದ ಬರಬಹುದೇ! (ರಾಮುವಿಗೆ) ನನ್ನ ವಂಶಕ್ಕೇ ಅಪಕೀರ್ತಿ ತಂದೆಯಲ್ಲೋ! ಅಂಥ ಸತ್ಯವಂತರನ್ನು ದೂರುವುದಕ್ಕೆ ನಿನಗೆ ಮನಸ್ಸಾದರೂ ಹೇಗೆ ಬಂತೋ!

ರಾಮು—ನನ್ನ ಮಾತಿಗಿಂತ ಅವನ ಮಾತಿನಲ್ಲೇ ಹೆಚ್ಚು ನಂಬಿಕೆಯೇನಣ್ಣ? ನಾನು ಇಲ್ಲೇ........

ಶಂಕರಪ್ಪ— ಮುಚ್ಚು ಬಾಯಿ ತಿರುಗಿ ಅವರ ವಿಚಾರ ಒಂದು ಮಾತಾಡೀಯೆ!

ರಾಮು—ನನ್ನಾಣೆ, ಅಣ್ಣ, ನಿನ್ನಾಣೆ, ಅವನು....

ಶಂಕರಪ್ಪ—ಮುಚ್ಚು ಸಾಕು. ಇನ್ನೊಂದು ಮಾತಾಡಿದರೆ ಮೈ ಮೂಳೆಯನ್ನೆಲ್ಲಾ ಮುರಿದಿಟ್ಟುಬಿಡುತ್ತೇನೆ.

ಸುಬ್ಬಾಶಾಸ್ತ್ರಿ—ಶಂಕರ, ಬೇಡ, ಈ ಕೋಪ ಬಿಟ್ಟುಬಿಡು. ನನಗೋಸ್ಕರ ಅವನನ್ನ ಹೊಡೆಯುವುದೆ? ತಪ್ಪು ಅವನದಲ್ಲ. ನಾನು ಹೇಳಲಿಲ್ಲವೆ?

ಶಂಕರಪ್ಪ—ಹಾಗಲ್ಲ ಶಾಸ್ತ್ರಿ. ನಿನಗೆ ಗೊತ್ತಿಲ್ಲ. ಬಿಡು ನೀನು. ಅವನ್ನ........ (ರೇಗಿಕೊಂಡು ರಾಮುವನ್ನು ಹೊಡೆಯಹೋಗುತ್ತಾನೆ. ಸುಬ್ಬಾಶಾಸ್ತ್ರಿ ಅವನನ್ನು ತಡೆದು ಸಮಾಧಾನಪಡಿಸಲು ಯತ್ನಿಸುತ್ತಾನೆ.)

ಸುಬ್ಬಾಶಾಸ್ತ್ರಿ—ನನಗೋಸ್ಕರ ಅವನ್ನ ಕ್ಷಮಿಸು, ಶಂಕರ, ನನಗೋಸ್ಕರ! ಕಾಲಿಗೆಬಿದ್ದು ಕೇಳಿಕೊಳ್ಳುತೇನೆ. (ಶಂಕರಪ್ಪನ ಕಾಲುಗಳನ್ನು ಎರಡು ಕೈಗಳಿಂದಲೂ ಮುಟ್ಟುತ್ತಾನೆ.)

ಶಂಕರಪ್ಪ—(ಬಹಳ ವಿಷಾದಪಟ್ಟುಕೊಂಡು ಸುಬ್ಬಾಶಾಸ್ತ್ರಿಯನ್ನು ಕೈಹಿಡಿದೆಬ್ಬಿಸಿ ಕಣ್ಣಿಗೆ ಒತ್ತಿಕೊಳ್ಳುತ್ತಾ) ಅಯ್ಯೋ ರಾಮರಾಮ! ಇದೇನಿದು! ನೀನು ನನ್ನ ಕಾಲು ಮುಟ್ಟುವುದೆ! (ರಾಮುವಿಗೆ) ನೋಡಿದೆಯೇನೋ ಅವರ ಗುಣವನ್ನ?

ರಾಮು—ಗುಣ! ಎಲ್ಲಾ ಬೂಟಾಟಿಕೆ.

ಶಂಕರಪ್ಪ—ಮುಚ್ಚು ಸಾಕು. ನೀವೆಲ್ಲಾ ಸೇರಿ ಮಾಡಿರುವ ತಂತ್ರ ನನಗೆ ಗೊತ್ತು. ಶಾಸ್ತ್ರಿಯನ್ನ ಕಂಡರೆ ನಿಮಗೆಲ್ಲಾ ಹೊಟ್ಟೆಯುರಿ. ಅವನ್ನ ಹೇಗಾದರೂ ಮಾಡಿ ಮನೆಯಿಂದ ಹೊರಡಿಸಬೇಕು ಅಂತ ಈ ಉಪಾಯ ಹುಡುಕಿದೀರಿ. ನಿಮಗೆ ಈ ಮನೆಯಲ್ಲಿರುವುದು ಇಷ್ಟವಿಲ್ಲ ದಿದ್ದರೆ ಹೊರಡಿ. ಲಲಿತನ್ನ ಕೊಟ್ಟು ಮದುವೆಮಾಡಿ ಅವನ್ನ ಮನೆ ಯಲ್ಲೇ ಇಟ್ಟುಕೊಂಡುಬಿಡುತ್ತೇನೆ.

ರಾಮು—ಮನೆಯವರೊಬ್ಬರೂ ಒಪ್ಪಬೇಕಾಗಿಲ್ಲವೇನೋ?

ಶಂಕರಪ್ಪ—ಮನೆಗೆ ನಾನು ಯಜಮಾನ. ನಾನು ಒಪ್ಪಿದರೆ ಆಯಿತು. ಮೊದ ಲನೇ ಲಗ್ನದಲ್ಲೇ ಮದುವೆ ನಡೆಸುತ್ತೇನೆ. ನೀವೆಲ್ಲಾ ಹೇಳಿದ ಹಾಗೆ ಕೇಳಿಕೊಂಡು ಬಿದ್ದಿರುವ ಹಾಗಿದ್ದರೆ ಇರಿ, ಇಲ್ಲದಿದ್ದರೆ ನಡೆಯಿರಿ.... ಈಗ ಶಾಸ್ತ್ರಿಯ ಕಾಲಿಗೆ ಬಿದ್ದು ಕ್ಷಮಾಪಣೆ ಕೇಳಿಕೋ ಮುಂಡೆ.

ರಾಮು—ಆಗುವುದಿಲ್ಲ. ನನ್ನ ಇಲ್ಲೇ ಕಡಿದುಹಾಕಿದರೂ ಸರಿ ಈ ಆಷಾಢ ಭೂತಿಯ ಕಾಲಿಗೆ ಬೀಳಬೇಕೆ!

ಶಂಕರಪ್ಪ—ಕತ್ತೆ, ನನ್ನೆದುರಿಗೇ ಅವನ್ನ ಬಯ್ಯುತೀಯಾ? (ಒಂದು ಕೋಲು ತೆಗೆದುಕೊಂಡು ಹೊಡೆಯಲು ಹೋಗುತ್ತಾನೆ. ಸುಬ್ಬಾಶಾಸ್ತ್ರಿ ತಡೆಯು ತ್ತಾನೆ. ಶಂಕರಪ್ಪ ಅವನ ಕೈಯಿಂದ ತಪ್ಪಿಸಿಕೊಂಡು ಹೋಗಲು ಪ್ರಯ ತ್ನಿಸಿ, ಅದು ಸಾಗದೆ) ಬಿಡು ಶಾಸ್ತ್ರಿ ನೀನು... (ರಾಮುವಿಗೆ) ನನ್ನ ಮನೆ ಬಿಟ್ಟು ನಡಿ. ತಿರುಗಿ ನಿನ್ನ ಮುಖ ನೋಡುವುದಿಲ್ಲ. ಇನ್ನೊಂದು ಸಲ ಈ ಹೊಸಲು ಮೆಟ್ಟೀಯೆ ಜೋಕೆ!

ರಾಮು— ಹೋಗುತ್ತೇನೆ. ನನಗೂ ಈ ಮನೆಯಲ್ಲಿರುವುದು ಬೇಕಿಲ್ಲ. ಇನ್ನೊಂದು ಮಾತು ಹೇಳಿ........

ಶಂಕರಪ್ಪ— ತೊಲಗು! ನನ್ನ ಕಣ್ಣೆದುರಿಗಿರಬೇಡ. ನನಗೆ ಮಗನೇ ಇಲ್ಲ ಅಂತ ತಿಳಿದುಕೊಂಡಿದ್ದೇನೆ ನನ್ನ ಆಸ್ತಿಯಲ್ಲಿ ಒಂದು ಕಿಲುಬು ಕಾಸೂ ನಿನ್ನ ಕೈಗೆ ಸಿಕ್ಕದ ಹಾಗೆ ಮಾಡುತ್ತೇನೆ ನಾನು ಸತ್ತರೆ ನೀನು ತಿಥಿಯನ್ನೂ ಮಾಡಬೇಡ.

ರಾಮು—ಬೇಡ ಆ ಶಾಸ್ತ್ರಿಯೇ ಮಾಡಲಿ. ಆಸ್ತಿಯನ್ನೆಲ್ಲಾ ಅವನಿಗೇ ಬರೆದು ಕೊಡು! (ಎನ್ನುತ್ತಾ ಹೊರಟುಹೋಗುತ್ತಾನೆ)

ಶಂಕರಪ್ಪ—(ತಾವು ಹೋಗುತ್ತಾ ಇರುವಾಗಲೇ ಅವನಿಗೆ ಕೇಳುವ ಹಾಗೆ ಗಟ್ಟಿಯಾಗಿ) ಹೂ, ಶಾಸ್ತ್ರಿಗೇ ಬರೆದುಕೊಡುತೇನೆ. ನಿನಗೆ ತಿರಿದು ತಿನ್ನುವುದಕ್ಕೆ ಒಂದು ತಾಮ್ರದ ಚೆಂಬೂ ಇಲ್ಲದ ಹಾಗೆ ಮಾಡುತೇನೆ. ಅಬ್ಬ! ಏನು ಹುಡುಗರು! ಏನು ಹುಡುಗರು! (ಕೋಪವನ್ನು ಸ್ವಲ್ಪ ಸಮಾಧಾನಕ್ಕೆ ತಂದುಕೊಂಡು ಸುಬ್ಬಾಶಾಸ್ತ್ರಿಯ ಬಳಿಗೆ ಹೋಗಿ) ಶಾಸ್ತ್ರಿ, ನೀನು ಮನಸ್ಸಿಗೆ ಏನು ತಿಳಿದುಕೊಂಡೆಯೋ ಏನೋ. ಇವರೆಲ್ಲಾ ಏನು ಬೇಕಾದರೂ ಆಡಿಕೊಳ್ಳಲಿ, ನನ್ನ ಮನಸ್ಸಿನಲ್ಲಿ ನಾನು ಬೇರೆ ನೀನು ಬೇರೆ ಅಂತ ತಿಳಿದಿಲ್ಲ ನೋಡು.

ಸುಬ್ಬಾಶಾಸ್ತ್ರಿ—ಶಂಕರ, ಈ ಗಲಾಟೆಯೆಲ್ಲಾ ಯಾಕೆ? ನಾನಿದ್ದು ನಿನ್ನ ಸಂಸಾರವನ್ನ ಯಾಕೆ ಒಡೆಯಬೇಕು? ನಾನು ಕಾಶಿಯೋ ರಾಮೇಶ್ವರವೋ ಎಲ್ಲಿಗಾದರೂ ಹೋಗಿ ಇದ್ದು ಬಿಡುತೇನೆ. ನನಗೆ ಎಲ್ಲಿದ್ದರೇನು?

ಶಂಕರಪ್ಪ—ಉಹು! ನೀನು ಖಂಡಿತ ಹೋಗುವುದಕ್ಕಾಗದು. ನನ್ನಾಣೆ.

ಸುಬ್ಬಾಶಾಸ್ತ್ರಿ—ನಾನು ಹೇಳುವುದು ಸ್ವಲ್ಪ ಕೇಳು ನಿನ್ನ ಮನೆಯವರೊಬ್ಬರಿಗೂ ನನ್ನ ಕಂಡರೆ ಆಗದು. ಏನಾದರೂ ಮಾಡಿ ನಿನ್ನ ಮನಸ್ಸು ತಿರುಗಿಸಿಯೇ ತಿರುಗಿಸುತಾರೆ. ಆಮೇಲೆ ಇದೇ ಚಾಡಿಯ ಮಾತುಗಳನ್ನ ನೀನು ನಂಬಿದರೂ ನಂಬಬಹುದು.

ಶಂಕರಪ್ಪ—ನಾನೇ? ಎಂದಿಗೂ ಇಲ್ಲ.

ಸುಬ್ಬಾಶಾಸ್ತ್ರಿ—ಈಗ ಹಾಗೆ ಹೇಳಬಹುದು ಶಂಕರ. ಆದರೆ ನೋಡು, ನನಗೆ ವಿರೋಧವಾಗಿ ನಿನ್ನ ಹೆಂಡತಿಯೇ ಬಂದು ಮಾತಾಡಿದರೆ, ಅವಳ ಮಾತಿನಲ್ಲಿ ವಿಶ್ವಾಸ ಹುಟ್ಟದೆ ಇರುತ್ತೆಯೆ?

ಶಂಕರಪ್ಪ—ಹೆಂಡತಿಯಲ್ಲ, ಯಾರು ಹೇಳಿದರೂ ನಂಬುವುದಿಲ್ಲ.

ಸುಬ್ಬಾಶಾಸ್ತ್ರಿ—ಗಂಡಹೆಂಡರಿಗೆ ಮನಸ್ತಾಪ ತಂದುಹಾಕಿ ಈ ಮನೆಯಲ್ಲಿರುವುದಕ್ಕೆ ನನಗೆ ಸ್ವಲ್ಪವೂ ಇಷ್ಟವಿಲ್ಲ. ನಾನು ಹೊರಡುತೇನೆ.

ಶಂಕರಪ್ಪ— ಆಗುವುದಿಲ್ಲ. ನೀನು ಹೋಗಕೂಡದು. ನೀನು ಹೋದರೆ ನಾನೂ ನಿನ್ನ ಹಿಂದೆಯೇ ಬಂದುಬಿಡುತೇನೆ

ಸುಬ್ಬಾಶಾಸ್ತ್ರಿ—ನಾನು ಎಲ್ಲಿದ್ದರೇನು ಶಂಕರ? ನೀನು ಅಡ್ಡಿಮಾಡಬೇಡ. ಬಿಡು.

ಶಂಕರಪ್ಪ— ಆಗದು.

ಸುಬ್ಬಾಶಾಸ್ತ್ರಿ— ನೀನು ಇಷ್ಟು ಹೇಳಿದಮೇಲೆ ನಾನು ಪ್ರತಿಯಾಗಿ ನಡೆಯ ಲಾರೆ. ಆದರೂ ನೋಡು, ನಾನು ಸ್ವಲ್ಪಮಟ್ಟಿಗೆ ದೂರವಾಗಿರುವುದೇ ಒಳ್ಳೆಯದು ಅಂತ ತೋರುತ್ತೆ. ಈಗ ಬಂದಿರುವ ಅಪವಾದ ಸಾಧಾ ರಣವಾದದ್ದಲ್ಲ ನಾನು ಸ್ವಲ್ಪ ಅಜಾಗರೂಕನಾಗಿದ್ದರೂ ಸಂಶಯಕ್ಕೆ ಕಾರಣವಾಗಬಹುದು. ನೀನು ಈಗ ಏನ್ಟೇ ಇಲ್ಲ ಅಂದರೂ ನಿನ್ನ ಮನಸ್ಸು ಕೂಡ ಒಡೆದುಹೋಗಬಹುದು ಆದ್ದರಿಂದ, ನಿನ್ನ ಹೆಂಡತಿ ಮನೆಯಲ್ಲಿದ್ದಾಗ ನಾನು ಇರುವುದಿಲ್ಲ. ಇಲ್ಲವೆ, ನನಗೆ ಹೊರಗಡೆ ಕೊಠಡಿ ಬಿಡಿಸಿಕೊಡು, ಅಲ್ಲಿದ್ದುಬಿಡುತೇನೆ.

ಶಂಕರಪ್ಪ—ಬೇಡ ಇವರ ಮಾತಿಗೆಲ್ಲಾ ಹೆದರುವುದೇನು? ಎಷ್ಟು ಬೊಗಳು ತಾರೋ ಬೊಗಳಿಕೊಳ್ಳಲಿ! ನೀನು ಮನೆಯಲ್ಲಿಯೇ ಇರು. ಮೊದಲಿನ ಹಾಗೆ ಎಲ್ಲರ ಕೈಲೂ ಮಾತುಕಥೆ ಆಡಿಕೊಂಡೇ ಇರು. ಯಾರೇನು ಹೇಳುತಾರೋ ನೋಡೋಣ. ಇಷ್ಟೇ ಅಲ್ಲ. ಇವರಿಗೆಲ್ಲಾ ಸ್ವಲ್ಪ ಬುದ್ಧಿ ಕಲಿಸಬೇಕು ನನ್ನ ಆಸ್ತಿಯನ್ನೆಲ್ಲಾ ನಿನ್ನ ಹೆಸರಿಗೇ ಬರೆದುಬಿಡುತೇನೆ. ಹಾಗೇನಾದರೂ ಮಾಡಿ ಹೆದರಿಸಿದರೆ ದಾರಿಗೆ ಬರುತಾರೆ.

ಸುಬ್ಬಾಶಾಸ್ತ್ರಿ—ಎಲ್ಲಾದರೂ ಉಂಟೆ ಶಂಕರ! ನಿನ್ನ ಆಸ್ತಿಯನ್ನ ನನ್ನ ಹೆಸರಿಗೆ ಬರೆಯೋಣ ಅಂದರೇನು? ನಿನಗೇನು ಮಕ್ಕಳು ಮರಿ ಇಲ್ಲವೆ!

ಶಂಕರಪ್ಪ—ಹೇಳಿದ ಹಾಗೆ ಕೇಳದೆ ಇರುವ ಮಕ್ಕಳಿದ್ದರೇನು ಇಲ್ಲದಿದ್ದರೇನು? ಈಗ ಆ ಅಯೋಗ್ಯ ಮಾತಾಡಿದ್ದು ಕೇಳಿದೆಯಲ್ಲ. ಹಾಗೇ ಮಾತಾಡು ವುದು, ತಂದೆಯ ಎದುರಿಗೆ ನಿಂತುಕೊಂಡು? ನಾನು ಹೇಳುವ ಹಾಗೆ ಮಾಡಿದರೆ ಅವನಿಗೆ ಮನಸ್ಸಿಗೆ ಭಯ ಹುಟ್ಟಿ ಸ್ವಲ್ಪ ಬುದ್ಧಿ ಬರುತ್ತೆ.

ಸುಬ್ಬಾಶಾಸ್ತ್ರಿ—ಹಾಗಲ್ಲ ಶಂಕರ. ಆಸ್ತಿಯನ್ನ ನನ್ನ ಹೆಸರಿಗೆ ಬರೆಯುವುದು ಸರಿಯಲ್ಲ.

ಶಂಕರಪ್ಪ—ಏನು ಶಾಸ್ತ್ರಿ, ನೀನು ಹೇಳುವ ಮಾತು? (ನಗುತ್ತಾ,) ನಿನ್ನ ಹೆಸರಿಗೆ ಬರೆದ ಮಾತ್ರಕ್ಕೆ ನೀನೇನು ಆಸ್ತಿಯನ್ನೆಲ್ಲಾ ಹೊತ್ತು ಹಾಕಿಕೊಂಡು ಎಲ್ಲಿಗಾದರೂ ಹೊರಟುಹೋಗುತೀಯೇನು?

ಸುಬ್ಬಾಶಾಸ್ತ್ರಿ— ಆದರೂ ಹೊಟ್ಟೆಯಲ್ಲಿ ಹುಟ್ಟಿದ ಮಗ ಇರುವಾಗ....

ಶಂಕರಪ್ಪ—ಚೆನ್ನಾಯಿತು. ನೀನೇನೋ ಹೊರಗಿನವನು ಅನ್ನುವ ಹಾಗೆ

ಮಾತಾಡುತೀಯೆ? ಲಲಿತನ್ನ ಕೊಟ್ಟು ಮದುವೆ ಮಾಡಿದ ಮೇಲೆ ನೀನೂ ಮನೆಯುವನೇ ಆಗುತೀಯಲ್ಲ!

ಸುಬ್ಬಾಶಾಸ್ತ್ರಿ—ಭಗವದನುಗ್ರಹವಿದ್ದ ಹಾಗಾಗಲಿ.

ಪರದೆ

## ನಾಲ್ಕನೆಯ ದೃಶ್ಯ

[ಅದೇ ಹಜಾರ. ಕೃಷ್ಣಮೂರ್ತಿಯೂ ಸುಬ್ಬಾಶಾಸ್ತ್ರಿಯೂ ಕುಳಿತಿದಾರೆ.]

ಕೃಷ್ಣಮೂರ್ತಿ—ನಮ್ಮ ಭಾವ ಮಗನ್ನ ಮನೆಯಿಂದ ಓಡಿಸಿಬಿಟ್ಟ ಅಂತ ಆಗಲೇ ಊರಲ್ಲೆಲ್ಲಾ ಹರಡಿಬಿಟ್ಟಿದೆ. ಈಗ ನೀವು ಹೇಳುವುದು ನಿಜವೋ ರಾಮು ಹೇಳುವುದು ನಿಜವೋ ಅದು ಹೇಗಾದರೂ ಇರಲಿ. ನೀವು ಹೇಳುವುದೇ ನಿಜ, ರಾಮು ನಿಮ್ಮ ಮೇಲಿನ ದ್ವೇಷದಿಂದ ಈ ತಂತ್ರ ಹೂಡಿದ ಅಂತಲೇ ಇಟ್ಟುಕೊಳ್ಳೋಣ. ಆದರೂ ಹುಡುಗ ಅಂತ ಅವನ್ನ ಕ್ಷಮಿಸುವುದಲ್ಲವೆ ದೊಡ್ಡ ಗುಣ?

ಸುಬ್ಬಾಶಾಸ್ತ್ರಿ—ಹೌದಪ್ಪ ಕೃಷ್ಣಮೂರ್ತಿ....

ಕೃಷ್ಣಮೂರ್ತಿ—ನಿಮ್ಮಂಥವರಿಗೆ ಆ ಹುಡುಗನ ಮೇಲೆ ಏನು ಹಗೆತನ? ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೆ? ನೀವು ಏನಾದರೂ ಮಾಡಿ ನಮ್ಮ ಭಾವನಿಗೆ ಹೇಳಿ ರಾಮೂನ ಮನೆಗೆ ಕರೆಸಿಕೊಳ್ಳಬೇಕು. ಊರಿನಲ್ಲಿ ನಮಗೆ ಗುರುತಾದವರೆಲ್ಲರೂ ಶಂಕರಪ್ಪನಿಗೆ ಏನು ಬುದ್ಧಿ ಬಂತು ಅಂದು ಕೊಳ್ಳುತಾ ಇದಾರೆ. ಶಾಸ್ತ್ರಿಗಳೆ, ನಾನು ಹೀಗೆ ಹೇಳುತಾನೆ ಅಂತ ಕೋಪಮಾಡಿಕೊಳ್ಳಬಾರದು ಇನ್ನು ಮುಂದೆ ನೀವು ಇವರ ಸಂಸಾರದ ವಿಷಯದಲ್ಲಿ ಬಾಯಿಹಾಕದೆ ಇರುವುದು ಒಳ್ಳೆಯದು. ರಾಮೂದೇ ತಪ್ಪು ಅಂದರೂ ನೀವು ತಂದೆ ಮಕ್ಕಳ ಮಧ್ಯೆ ಬರಬಾರದು.

ಸುಬ್ಬಾಶಾಸ್ತ್ರಿ—ಅಲ್ಲವಯ್ಯಾ ಕೃಷ್ಣಮೂರ್ತಿ, ನನ್ನ ಏನು ಮಾಡಹೇಳುತೀಯೆ?

ನನಗೆ ರಾಮುವನ್ನು ಕಂಡರೆ ಮತ್ಸರವೇನೂ ಇಲ್ಲ ನೀನು ಹೇಳುವ ಹಾಗೆ, ಏನೋ ಹುಡುಗಬುದ್ಧಿ, ಹಾಗಾಡಿದ. ಶಂಕರಪ್ಪನ್ನ ಸಮಾಧಾನ ಮಾಡಬೇಕು ಅಂತ ಕೈಲಾದಮಟ್ಟಿಗೂ ಪ್ರಯತ್ನಮಾಡಿದೆ. ನೀನೇ ಕಂಡಿದೀಯಲ್ಲ ಅವನ ಸ್ವಭಾವವನ್ನ? ಕೋಪ ಬಂದಾಗ ಯಾರ ಮಾತನ್ನೂ ಕೇಳುವುದಿಲ್ಲ. ಇದಲ್ಲದೆ ನೋಡು, ಈಗ ರಾಮು ಮನೆಗೆ ಬಂದರೆ ನಾನು ಮನೆ ಬಿಟ್ಟು ಹೊರಟುಹೋಗಬೇಕು ನನಗೆ ಅವನ ಮೇಲೆ ಪ್ರೀತಿ ಅಂತಲ್ಲ. ಆದರೂ ಈ ಅಪವಾದ ಬಂದ ಮೇಲೆ ನಾನು ಪುನಃ ಅವನ ಜೊತೆಯಲ್ಲಿ ಹೊಂದಿಕೊಂಡಿರುವುದಕ್ಕಾಗುತ್ತೆಯೆ? ಜನ ಗಳು ಏನಂದುಕೊಳ್ಳುತಾರೆ? ಇವನೆಲ್ಲೋ ತಪ್ಪಿ ನಡೆದಿರಬೇಕು; ಹೇಗಾ ದರೂ ಮಾಡಿ ರಾಮುವನ್ನೂ ಒಳಹಾಕಿಕೊಳ್ಳಬೇಕು ಅಂತ ಈಗ ಅವನ ಕೈಲಿ ಸ್ನೇಹ ಬೆಳೆಸುತಾ ಇದಾನೆ, ಅನ್ನುವುದಿಲ್ಲವೆ? ಅದಕ್ಕೋ ಸ್ಕರ ನಾನು ಸುಮ್ಮನೆ ಇದೇನೆ. ಮುಖ್ಯ ಇದರಲ್ಲೆಲ್ಲಾ ನಮ್ಮ ಯತ್ನ ವೇನಿದೆ? ಭಗವಂತನ ಸಂಕಲ್ಪ....

ಕೃಷ್ಣಮೂರ್ತಿ—ಶಾಸ್ತ್ರಿಗಳೆ, ಇದೆಲ್ಲಾ ಬರೀ ನಟನೆಯ ಮಾತು. ಆಡಿದರೆ ಯಾರಾದರೂ ನಂಬುವಂಥ ಮಾತಾಡಬೇಕು. ನೀವು ಈ ಮನೆಯಲ್ಲಿದ್ದು ಕೊಂಡು ಮನೆಯ ಮಗನನ್ನೇ ಆಚೆಗೆ ದಬ್ಬಿಸುವುದು ಭಗವಂತನ ಸಂಕಲ್ಪವೋ? ಭಗವಂತ ತನ್ನ ಸಂಕಲ್ಪವನ್ನು ನಿಮಗೆ ಮಾತ್ರ ತಿಳಿಸಿ ದಾನೇನೋ! ಜನಗಳು ಏನಂದುಕೊಂಡರೇನು? ನೀವು ಜನಾಪವಾದಕ್ಕೆ ಹೆದರೋರಲ್ಲವಲ್ಲ! ಯಾವ ಕೆಲಸ ಮಾಡಿದರೂ ಪರಮಾತ್ಮಪ್ರೀತಿ ಯಾಗಿ ಮಾಡೋರು! ಈಗ ಸತ್ಕಾರ್ಯ ಮಾಡುವುದಕ್ಕೆ ಒಳ್ಳೇ ಸಮಯ ಸಿಕ್ಕಿದೆ. ಜನ ಏನಾದರೂ ಹೇಳಿಕೊಳ್ಳಲಿ, ನಿಮ್ಮ ಆತ್ಮ ಒಪ್ಪುವ ಹಾಗೆ ಮಾಡಿ. ನಮ್ಮ ಭಾವ ನಿಮ್ಮ ಮಾತು ಕೇಳುತಾನೆ. ರಾಮೂನ....

ಸುಬ್ಬಾಶಾಸ್ತ್ರಿ—ಅಯ್ಯೋ ಕೃಷ್ಣಮೂರ್ತಿ, ಭಗವಂತನ ಪ್ರೇರಣೆಯಾದ ಹಾಗೇ, ನನ್ನ ಆತ್ಮ ಒಪ್ಪುವ ಹಾಗೇ ನಾನು ನಡೆಯುವುದು. ಆಗಲೇ ಹೇಳಿದೆನಲ್ಲ. ನನಗೆ ರಾಮೂ ಮೇಲೆ ಸ್ವಲ್ಪವೂ ಕೋಪವಿಲ್ಲ. ಆದರೆ ತಿರುಗಿ ಅವನ ಜೊತೆಯಲ್ಲಿ ಒಂದೇ ಮನೆಯಲ್ಲಿರುವುದು ನನ್ನ ಮನಸ್ಸು ಒಪ್ಪದ ಮಾತು.

ಕೃಷ್ಣಮೂರ್ತಿ—ನನ್ನ ಭಾವ ಆಸ್ತಿಯನ್ನೆಲ್ಲಾ ನಿಮ್ಮ ಹೆಸರಿಗೆ ಮಾಡಿದಾ ನಂತಲ್ಲ, ನೀವು ಅದಕ್ಕೆ ಒಪ್ಪಬಹದೋ? ಅದೂ ಭಗವಂತನ ಪ್ರೇರಣೆ ಯೇನೋ?

ಸುಬ್ಬಾಶಾಸ್ತ್ರಿ—ನಾನು ಇಲ್ಲಿಗೆ ಹಣದಾಸೆಯಿಂದ ಬಂದಿಲ್ಲ ಅದು ಎಲ್ಲರಿಗೂ ತಿಳಿದ ವಿಷಯ. ನನ್ನ ದೃಷ್ಟಿಯಲ್ಲಿ ಚಿನ್ನಬೆಳ್ಳಿಯೂ ಒಂದೇ, ಮಣ್ಣೂ ಒಂದೇ ನಮ್ಮ ಶರೀರವೇ ಶಾಶ್ವತವಲ್ಲ; ಇನ್ನು ಚಿನ್ನ ಬೆಳ್ಳಿ ಶಾಶ್ವತವೆ? ಹೀಗೆಲ್ಲಾ ಅನ್ಯಾಯ ಮಾಡಿ ಹಣ ಗಳಿಸಿ ನಾನೇನು ಮಾಡಿಕೊಳ್ಳಲಿ? ಅಥವಾ ಹಾಗೆ ಗಳಿಸಿಟ್ಟುಕೊಂಡರೆ ಅದು ನನಗೆ ದಕ್ಕುತ್ತದೆಯೋ? ಹಾಲು ಕುಡಿದ ಮಕ್ಕಳೇ ಬದಕುವುದು ಕಷ್ಟ. ಇನ್ನು ವಿಷ ಕುಡಿದ ಮಕ್ಕಳು ಬದುಕುವುದುಂಟೆ! ಶಂಕರಪ್ಪನ ಬಲವಂತಕ್ಕೋಸ್ಕರ ಈ ಆಸ್ತಿಯನ್ನ ನಾನೇ ಒಪ್ಪಿಸಿಕೊಳ್ಳಬೇಕಾಯಿತು. ಅದಕ್ಕೂ ನಾನು ಒಪ್ಪುತಾ ಇರಲಿಲ್ಲ. ಆದರೆ ಇದೇ ಆಸ್ತಿ ದುಷ್ಟರ ಕೈಗೆ ಸಿಕ್ಕಿ ಅದರಿಂದ ಲೋಕಕ್ಕೆ ಕೆಡಕಾಗಬಹುದು ಅನ್ನುವ ಶಂಕೆಯಿಂದ ನಾನೇ ಅದನ್ನು ವಹಿಸಿಕೊಳ್ಳಬೇಕಾಯಿತು. ಹಣಕಾಸಿನಿಂದ ನನಗೇನಾಗಬೇಕು? ಆ ಹಣದಿಂದ ನಾಲ್ಕು ಜನಕ್ಕೆ ಏನಾದರೂ ಉಪಕಾರವಾದರೆ ಸಾರ್ಥಕ ವಾದ ಹಾಗೆ.

ಕೃಷ್ಣಮೂರ್ತಿ—ಶಾಸ್ತ್ರಿಗಳೆ, ನಾನು ಮನಸ್ಸಿನಲ್ಲಿರುವುದನ್ನು ಸ್ಪಷ್ಟವಾಗಿ ಹೇಳ ಬೇಕಾಗುತ್ತೆ. ಇದೆಲ್ಲಾ ಬರೀ ಕಪಟ. ಆಸ್ತಿ ಶಂಕರಪ್ಪನದು ಅವನಿಂದ ರಾಮುವಿಗೆ ಸೇರಬೇಕಾದ್ದು. ಅವನ ಹಣ ಅವನು ಹೇಗೆ ಬೇಕಾದರೂ ಉಪಯೋಗಿಸಿಕೊಳ್ಳಲಿ. ನಿಮಗೇನು? ನೀವು ಧರ್ಮ, ಧರ್ಮ. ಅಂತಿ ರುತೀರಲ್ಲ, ಅಪ್ಪನ ಆಸ್ತಿ ಮಗನಿಗೆ ತಪ್ಪಿಸಿ ನೀವು ಅನುಭವಿಸಬಹುದು ಅಂತ ಯಾವ ಧರ್ಮಶಾಸ್ತ್ರದಲ್ಲಿ ಹೇಳಿದೆ? ರಾಮು ಇರುವ ಮನೆಯಲ್ಲಿ ನಿಮಗೆ ಇರುವುದಕ್ಕೆ ಇಷ್ಟವಿಲ್ಲದೆ ಇದ್ದರೆ ಬಿಟ್ಟುಹೋಗಿ. ಬಿಟ್ಟುಹೋಗ ಬೇಕಾದವರು ಯಾರು, ನೀವೋ ರಾಮುವೋ?

ಸುಬ್ಬಾಶಾಸ್ತ್ರಿ—ಹು! ನಿನ್ನ ಕೈಲಿ ಏನು ನನಗೆ ಮಾತು! ನನಗೆ ಜಪಕ್ಕೆ ಹೊತ್ತಾಯಿತು. ಹೊರಡುತೇನೆ. (ಹೋಗುತ್ತಾನೆ.)

(ಸುಬ್ಬಾಶಾಸ್ತ್ರಿಯು ಹೋದ ಮೇಲೆ, ಶಾರದೆ, ಸರಸ್ವತಿ, ಲಲಿತ ಇವರು ಪ್ರವೇಶಿ ಸುತ್ತಾರೆ.)

ಶಾರದೆ—(ಸುಬ್ಬಾಶಾಸ್ತ್ರಿ ಹೋದ ಕಡೆ ನೋಡಿ)ಹೋದನೋ ಅವನು....ಕಿಟ್ಟು, ನೀನಾದರೂ ಅವರಿಗೆ ಸ್ವಲ್ಪ ಹೇಳಪ್ಪ. ಏನೋ ಕೇಡುಗಾಲಕ್ಕೇ ಅವರಿಗೆ ಈ ಬುದ್ಧಿ ಬಂದಿದೆ. ಲಲಿತನ್ನ ಆ ಶಾಸ್ತ್ರಿಗೇ ಕೊಡಬೇಕಂತೆ. ನಾಳೆ ದಿನವೇ ಲಗ್ನಪತ್ರಿಕೆ ಆಗಬೇಕಂತೆ. ಲಲಿತ ಅನ್ನ ನೀರು ಬಿಟ್ಟು ಅಳುತಾ ಕೂತಿದಾಳೆ. ನಾವು ಯಾರಾದರೂ ಅವರಿಗೆ ಹೇಳುವುದಕ್ಕೆ ಹೋದರೆ ಹುಲಿಯ ಹಾಗೆ ಮೇಲೆ ಬೀಳುತಾರೆ ...ಇಗೋ ಬಂದರು.

(ಹೊರಬಾಗಿಲಿನಿಂದ ಶಂಕರಪ್ಪ ಪ್ರವೇಶಿಸುತ್ತಾನೆ.)

ಶಂಕರಪ್ಪ—(ಶಾರದೆಗೆ) ಎಲ್ಲಾ ಸಿದ್ಧಮಾಡಿಕೊ. ನಾಳೆಯೇ ಲಗ್ನಪತ್ರಿಕೆ ಆಗಬೇಕು. ಯಾರುಯಾರನ್ನ ಕರೆಯಬೇಕೋ ಇವತ್ತೇ ಕರೆದುಬಿಡಿ.

(ಸರಸ್ವತಿ ಲಲಿತೆಯನ್ನು ಬಲವಂತಮಾಡಿ ಮುಂದಕ್ಕೆ ಕಳಿಸುತ್ತಾಳೆ.)

ಲಲಿತ—(ಶಂಕರಪ್ಪನ ಹತ್ತಿರ ಬಂದು ತಲೆ ಬಗ್ಗಿಸಿ ನಿಂತುಕೊಂಡು) ಅಣ್ಣ, ಇನ್ನೇನು ಹೇಳಿದರೂ ಕೇಳುತೇನೆ. ಈ ಮದುವೆಗೆ ಮಾತ್ರ ಬಲವಂತ ಮಾಡಬೇಡ. ಇನ್ನು ಯಾವುದರಲ್ಲೂ ನಿನ್ನ ಮಾತಿಗೆ ಪ್ರತಿ ಆಡುವುದಿಲ್ಲ.

ಶಂಕರಪ್ಪ—(ತನಗೆ ತಾನೇ) ಪಾಪ, ಇವಳನ್ನು ನೋಡಿದರೆ ...(ಮನಸ್ಸನ್ನು ಗಟ್ಟಿಮಾಡಿಕೊಂಡು) ಉಹು! ಹೆಂಗಸರ ಅಳುವಿಕೆಗೆಲ್ಲಾ ಹೆದರಿಕೊಳ್ಳ ಬಾರದು ನಡಿ ಲಲಿತ, ಇದೇನು ನಾಚಿಕೆಗೇಡು! ಮನ್ನ ಗೊತ್ತು ಮಾಡಿದರೆ ಹೆಣ್ಣುಮಕ್ಕಳು ಮಾಡಿಕೊಳ್ಳುದಿಲ್ಲ ಅಂದದ್ದು ನಾನೆಲ್ಲೂ ಕೇಳಿಲ್ಲ.

ಸರಸ್ವತಿ—ಅಣ್ಣ, ಇಷ್ಟು ಹಟ ಮಾಡ........

ಶಂಕರಪ್ಪ— ನಿನಗೆ ಆಗಲೇ ಹೇಳಿದೇನೆ. ನೀನು ಈ ಮಾತಿಗೆ ಬರಬೇಡ.

ಕೃಷ್ಣಮೂರ್ತಿ—ಒಂದು ಮಾತು, ಭಾವ........

ಶಂಕರಪ್ಪ—ಈ ಮದುವೆಯ ಮಾತಾದರೆ ಬೇಡ.

ಶಾರದೆ—ಇನ್ನು ನಾನು ತಾನೆ ಏನು ಹೇಳಲಿ? ಇಷ್ಟು ಮಟ್ಟಿಗೆ ಮನೆಯವರ ಮೇಲೆ ಕತ್ತಿ ಮಸೆದು, ಹೊರಗಿನವನ ಪಕ್ಷ ಸಾಧಿಸುವುದುಂಟೆ? ಹೇಳಿದ ಹಾಗೆಲ್ಲಾ ಕುಣಿಯುವ ಹಾಗೆ ಅದೇನು ಮದ್ದು ಮಾಟ ಮಾಡಿ ದಾನೋ ಅವನು! ರಾಮು ಕಣ್ಣಾರ ಕಂಡದ್ದನ್ನು ಹೇಳಿದರೂ ನಿಮಗೆ ನಂಬಿಕೆಯಿಲ್ಲವಲ್ಲ.

ಶಂಕರಪ್ಪ—ತಿರುಗಿ ಅವನ ಮಾತೆತ್ತಬೇಡ ನನ್ನೆದುರಿಗೆ. ನಿಮ್ಮ ಒಳಸಂಚೆಲ್ಲಾ

ನನಗೆ ಗೊತ್ತು. ನಿಜವಾಗಿಯೂ ಶಾಸ್ತ್ರಿ ಹಾಗೆ ಮಾತನಾಡಿದ್ದರೆ ನೀನು ಸುಮ್ಮನೆ ಇರುತಾ ಇದ್ದೆಯೋ? ನೀನೇ ನನ್ನ ಕೈಲಿ ಹೇಳಿ ರಂಪ ಮಾಡಿ ಸುತಾ ಇದ್ದೆ. ಗರತಿಯಾದವಳು ಯಾವಳು ಅಂಥಾ ಮಾತು ಕೇಳುತಾ ನಿಂತಿರುತಾಳೆ?

ಶಾರದೆ—ನೀವು ಅವನ್ನ ಮನೆಯಲ್ಲಿ ಇಟ್ಟುಕೊಂಡು ರಾಮೂನ ಓಡಿಸಿರುವುದ ರಿಂದ ಮಾನ ಹೋಗಿರುವುದು ಸಾಲದೇನೊ. ಇದೂ ಊರಿಗೆಲ್ಲಾ ತಿಳಿದು ಹಾದಿರಂಪ ಬೀದಿರಂಪವಾಗಬೇಕಾಗಿತ್ತು! ಯಾರಾದರೂ ನಕ್ಕಾರು ಅಂದರೆ ನಾಚಿಕೆಗೇಡು. ಹೀಗಾಡಬೇಡಿ.

ಶಂಕರಪ್ಪ— ಮುಚ್ಚು ಬಾಯಿ. ಯಾರು ನುಗುತಾರೋ ನಗಲಿ ನನ್ನೆದುರಿಗೆ, ನೋಡೋಣ ನನ್ನ ಮಾನ ಹೋದರೆ ಹೋಗಲಿ.

ಶಾರದೆ—ನನ್ನ ಮಾನ ಉಳಿಸಿಕೊಳ್ಳಬೇಕು ಅಂತ ಇನ್ನೂ ನನಗೆ ಸ್ವಲ್ಪ ಆಸೆ ಉಳಿದಿದೆ.

ಶಂಕರಪ್ಪ—ನನ್ನ ಮನೆಯಲ್ಲಿರಬೇಕಾದರೆ ಹೇಳಿದ ಹಾಗೆ ಕೇಳಿಕೊಂಡು ಬಿದ್ದಿರಬೇಕು. ಇಲ್ಲದಿದ್ದರೆ ನೀನೂ ರಾಮುವಿನ ಹಿಂದೆ ನಡಿ.

ಶಾರದೆ—ಎಲ್ಲಾದರೂ ಹೀಗುಂಟೆ ಅಂದರೆ? ಸ್ವಲ್ಪ ನಿಧಾನಿಸಿ ಯೋಚನೆಮಾಡಿ. ಆ ಚಂಡಾಲನ ಕೈಗೆ ಹಾಕಬೇಡಿ ಲಲಿತನ್ನ.

ಶಂಕರಪ್ಪ—ಬೇಡ ಶಾಸ್ತ್ರಿಯನ್ನ ಹಾಗೆಲ್ಲಾ ಕೆಟ್ಟ ಮಾತು ಅನ್ನಬೇಡ!

ಕೃಷ್ಣಮೂರ್ತಿ—ಭಾವ, ಏನು ಮಾಡಿದರೆ ನಿನಗೆ ನಮ್ಮ ಮಾತನಲ್ಲಿ ನಂಬಿಕೆ ಬರುತ್ತೆ ಹೇಳು. ರಾಮು ಕೇಳಿದ ಹಾಗೆ ನೀನೇ ಕಿವಿಯಾರ ಕೇಳಿದ ರಾದರೂ ನಂಬುತೀಯಾ?

ಶಂಕರಪ್ಪ—ಏನು ಕೇಳುವುದು?



ಕೃಷ್ಣಮೂರ್ತಿ—ರಾಮೂ ಕೇಳಿದ್ದನ್ನೆಲ್ಲಾ.

ಶಂಕರಪ್ಪ— ನಿನಗೆಲ್ಲೋ ಹುಚ್ಚು!

ಕೃಷ್ಣಮೂರ್ತಿ—ನೀನು ಕೇಳುವ ಹಾಗೆ ಮಾಡಿದರೋ? ಈಗ ನೀನೇನೂ ನಮ್ಮನ್ನ ನಂಬಬೇಡ. ಒಂದು ಕಡೆ ಔತುಕೊಂಡಿರು. ಆಗ ನಾವು ಹೇಳಿದ್ದೆಲ್ಲ ನಡೆದರೆ?

ಶಂಕರಪ್ಪ—ಹಾಗೆ ನಡೆದರೆ....ನಿನಗೆ ಹೊತ್ತುಹೋಗದು ಕಣೋ. ಹಾಗೆ ನಡೆ ಯೋಣ ಅಂದರೇನು! ಅಸಾಧ್ಯ! ಈ ಆಟವನ್ನೆಲ್ಲಾ ತೆಗೆಯಬೇಡ

ನನ್ನ ಹತ್ತಿರ.

ಶಾರದೆ—ಬೇಡಿ ಅಂದರೆ. ನಮ್ಮ ಮಾತಿನಲ್ಲಿ ಯಾಕೆ ಅಷ್ಟು ಅಪನಂಬಿಕೆ? ಇದುವರೆಗೆ ಅನುಭವಿಸಿದ್ದು ಸಾಲದೆ? ತಿರುಗಿ ನಾನು ಅವನ ಕೈಲಿ ಆ ಮಾತು ಕೇಳುವ ಹಾಗೆ ಮಾಡಬೇಡಿ ಅಂದರೆ. ನೀವು ಎದುರಿಗಿದ್ದು ಕೊಂಡು ಅವನು ಹಾಗೆಲ್ಲಾ ಮಾತಾಡುವದನ್ನ ಕೇಳಿದರೆ ನಿಮಗೆ ತಾನೆ ಎಷ್ಟು ಅವಮಾನ?

ಶಂಕರಪ್ಪ—ನನಗೆ ಗೊತ್ತು ಕಥೆ ಹೇಗೆ ತಿರುಗುತ್ತೆ ಅಂತ! ಈಗೇನು ನಾಳೆಗೆ ಅಣಿಮಾಡಿಕೊಳ್ಳುತೀಯೋ ಇಲ್ಲವೋ?

ಶಾರದೆ—(ಹಲ್ಲು ಕಚ್ಚಿಕೊಂಡು ಕೋಪದಿಂದ) ಹಾಗಾದರೆ ಕೇಳಿ. ನಿಮಗೆ ನಂಬಿಕೆ ಹುಟ್ಟುವ ಹಾಗೆ ಮಾಡಬೇಕಾದರೆ ಅವನು ಹೇಳುವ ಮಾತಿಗೆಲ್ಲ ಕೋಪಮಾಡಿ ಕೊಳ್ಳದೆ ಇರುವವಳ ಹಾಗೆ ನಟಿಸಿ ಒಳ್ಳೆಯ ಮಾತಿನಲ್ಲೇ ಉತ್ತರಕೊಡಬೇಕಾಗುತ್ತೆ. ನಿಂತುಕೊಂಡು ಕೇಳುತೀರಾ? ಆಗಲಾದರೂ ನಂಬಿಕೆ ಹುಟ್ಟುತ್ತೆಯೆ?

ಶಂಕರಪ್ಪ—ನೋಡೋಣ, ಅದೇನು ನಂಬಿಕೆ ಹುಟ್ಟುತ್ತೆಯೋ.

ಶಾರದೆ—ತಿರುಗಿ ಕೇಳಿಕೊಳ್ಳುತೇನೆ, ನಿಮ್ಮ ದಮ್ಮಯ್ಯ, ಬೇಡಿ, ಹೀಗೆ ಹಟ ಹಿಡಿಯಬೇಡಿ. (ಶಂಕರಪ್ಪ ತಿರಸ್ಕಾರದಿಂದ ಬಾಗಿಲಿನ ಕಡೆಗೆ ತಿರುಗುತ್ತಾನೆ. ಶಾರದೆ ಮತ್ತೆ ಕೋಪದಿಂದ) ಕೈ ಹಿಡಿದ ಗಂಡನೇ ಹೆಂಡತಿಯನ್ನ ಇಂಥಾ ಕಷ್ಟಕ್ಕೆ ಸಿಕ್ಕಿಸಿದ್ದು ಎಲ್ಲೂ ಕೇಳಿರಲಿಲ್ಲ. ಆಗಲಿ. ನಿಮ್ಮ ಹಟವೇ ಸಾಗಲಿ. ನಿಂತುಕೊಂಡು ಕೇಳುವಿರಂತೆ!

ಸರಸ್ವತಿ—(ಶಾರದೆ) ಆ ಶಾಸ್ತ್ರಿ ಸುಳಿವು ತಿಳಿದುಕೊಂಡು ತಿರುಗಿ ವೈರಾಗ್ಯ ನಟಿಸಿದರೂ ನಟಿಸಬಹುದು. ಅವನ ಕೈಲಿ ಬಲು ಒಳ್ಳೆಯ ಮಾತಾಡಬೇಕಾಗುತ್ತೆ.

ಶಾರದೆ—ಆಡಬೇಕಮ್ಮ. ಇಲ್ಲದಿದ್ದರೆ ಲಲಿತ ಜೀವಮಾನವೆಲ್ಲಾ ಅನುಭವಿಸಬೇಕಲ್ಲ! ನಾನಿದ್ದುಕೊಂಡು ಅದನ್ನು ನೋಡಲಾರೆ. ....ನೀವೆಲ್ಲಾ ಹೊರಟು ಹೋಗಿ. ಕಿಟ್ಟು, ಶಾಸ್ತ್ರಿಗಳನ್ನ ನಾನು ಬರಹೇಳಿದೆ ಅಂತ ಮಾದನ ಕೈಲಿ ಹೇಳಿಕಳುಹಿಸು. (ಶಂಕರಪ್ಪ ಹೊರತು ಉಳಿದವರೆಲ್ಲರೂ ಹೊರಟುಹೋಗುತ್ತಾರೆ. ಶಂಕರಪ್ಪನಿಗೆ) ನೀವು ಈ ಒಳಬಾಗಿಲಿನ ಹಿಂದೆ ನಿಂತುಕೊಳ್ಳಿ. ಸ್ವಲ್ಪವೂ ಕಾಣದ ಹಾಗಿರಬೇಕು. (ಶಂಕರಪ್ಪ ಹೋಗಿ

ಒಳಬಾಗಿಲಿನ ಹಿಂದೆ ನಿಂತುಕೊಳ್ಳುತ್ತಾನೆ.) ನಾನು ಅವನ ಕೈಲಿ ಮಾತಾಡುವಾಗ ಅವನ್ನ ಪ್ರೀತಿಸುವ ಹಾಗೆ ಮಾತಾಡಬೇಕಾಗಿ ಬರ ಬಹುದು. ನೀವೇನಾದರೂ ಕೋಪಿಸಿಕೊಂಡು ಸದ್ದು ಮಾಡಿಬಿಟ್ಟರೆ ಅವನು ಸುಳಿವು ತಿಳಿದುಕೊಂಡುಬಿಡುತಾನೆ. ಅಗೋ ಬಂದನೇನೊ.

(ಶಾರದೆ ಮೇಜಿನ ಬಳಿಗೆ ಹೋಗಿ ಅಲ್ಲಿ ಏನನ್ನೋ ಹುಡುಕುವವಳಂತೆ ನಿಂತಿದಾಳೆ. ಸುಬ್ಬಾಶಾಸ್ತ್ರಿ ಪ್ರವೇಶಿಸುತ್ತಾನೆ. ಒಂದು ನಿಮಿಷ ಅವನು ಬಂದದ್ದನ್ನು ಕಾಣದವಳಂತೆಯೇ ಇದ್ದು ಅನಂತರ ಶಾರದೆ ಅವನ ಕಡೆ ತಿರುಗುತ್ತಾಳೆ.)

ಸುಬ್ಬಾಶಾಸ್ತ್ರಿ—ಏನೋ ಹೇಳಿಕಳುಹಿಸಿದಿರಂತೆ?

ಶಾರದೆ—ಸುಮ್ಮನೆ. ನೀವು ಜಪಕ್ಕೆ ಕೂತುಕೊಳ್ಳಬೇಕಾಗಿತ್ತೇನೋ?

ಸುಬ್ಬಾಶಾಸ್ತ್ರಿ—(ಸಂದೇಹದಿಂದ, ಏನು ಹೇಳಬೇಕೋ ಸರಿಯಾಗಿ ತೋರದೆ) ಇಲ್ಲ .. ಪರವಾಯಿಲ್ಲ.

ಶಾರದೆ—ನೀವು ಅವತ್ತು ಬೆಳಗ್ಗೆ ನನ್ನ ಹಾಗೆ ಮಾತಾಡಿಸಬಹುದೆ?

ಸುಬ್ಬಾಶಾಸ್ತ್ರಿ—(ಸ್ವಲ್ಪ ಅನುಮಾನಿಸಿ) ಏನೋ ನನ್ನ ಮನಸ್ಸಿನಲ್ಲಿ ಒಂದು ಭ್ರಾಂತಿ.

ಶಾರದೆ—ನಿಮ್ಮ ಮನಸ್ಸಿನಲ್ಲಿ ಭ್ರಾಂತಿ ಅಂತ ನನ್ನ ಮಾನಹೋಗುವ ಹಾಗೆ ಮಾಡಿದ್ದಿರಲ್ಲ!

ಸುಬ್ಬಾಶಾಸ್ತ್ರಿ—ಏನೋ ಆಗ ಹಾಗೆ ತೋರಿಬಿಟ್ಟಿತು. ಹೆಚ್ಚು ತೊಂದರೆ ಯೇನೂ ಆಗಲಿಲ್ಲವಲ್ಲ. ಅಷ್ಟೇ ಸಂತೋಷ.

ಶಾರದೆ—ಅವತ್ತು ರಾಮು ಬಂದ ಸದ್ದು ಕೇಳಿದಾಗ ಕೆಟ್ಟೆ ಅಂತಲೇ ಅಂದು ಕೊಂಡಿದ್ದೆ.

ಸುಬ್ಬಾಶಾಸ್ತ್ರಿ—(ಸ್ವಲ್ಪ ಧೈರ್ಯ ತಂದುಕೊಂಡು)—ರಾಮುವನ್ನು ಕೂಗ ಬೇಕಾಗಿಯೇ ಇರಲಿಲ್ಲ.

ಶಾರದೆ—ಕೂಗದೆ! ಅವನು ಅಲ್ಲಿಗೆ ಬಂದ ಸದ್ದು ಕೇಳಿಸಿತು. ನಿಮ್ಮ ಮಾತು ಸುಮ್ಮನೆ ಕೇಳುತಾ ನಿಂತಿದ್ದರೆ ನನ್ನ ಮೇಲೆ ಅನುಮಾನ ಬರುತ್ತಾ ಇರಲಿಲ್ಲವೆ? ಇಲ್ಲದ ಅಪವಾದ ಯಾಕೆ ಹೊತ್ತುಕೊಳ್ಳಬೇಕು ಅಂತ ಕೂಗಿದೆ.

ಸುಬ್ಬಾಶಾಸ್ತ್ರಿ— ತೊಂದರೆಯೇನೂ ಇಲ್ಲವೆ ಅಷ್ಟರಲ್ಲೇ ಪರ್ಯವಸಾನ ವಾಯಿತಲ್ಲ.

ಶಾರದೆ—ಯಾರಿದ್ದಾರೆ ಯಾರಿಲ್ಲ ಅನ್ನುವ ಯೋಚನೆಯೇ ಇಲ್ಲದೆ ನನ್ನ ಹಾಗೆ ಹಿಡಿದು ನಿಲ್ಲಿಸಿದಿರಲ್ಲ!

ಸುಬ್ಬಾಶಾಸ್ತ್ರಿ—ಹಾಗಾದರೆ ನಿಜವಾಗಿ ನಿನಗೆ ನನ್ನ ಮೇಲೆ ಕೋಪವಿಲ್ಲ? ನನ್ನ ಪ್ರೀತಿ ...

ಶಾರದೆ—ಸದ್ಯಕ್ಕೆ ಸಾಕು. ನಿಮ್ಮ ಪ್ರೀತಿಯ ಮಾತೆತ್ತಬೇಡಿ. ಇದುವರೆಗೆ ಆದ ಹಗರಣವೇ ಸಾಕಾಗಿದೆ.

ಸುಬ್ಬಾಶಾಸ್ತ್ರಿ—ಶಾರದೆ, ನನಗೆ ಹೇಳಿ ಕಳುಹಿಸಿದ್ದು ಈ ಮಾತು ಹೇಳುವುದಕ್ಕೇ? ಹಗರಣ ಯಾಕಾಗಬೇಕು? ಶಂಕರಪ್ಪನಿಗೆ ಅನುಮಾನವೇನೂ ಇಲ್ಲ. ಅವನೇ ಹೇಳಲಿಲ್ಲವೆ?

ಶಾರದೆ—ನಿಮ್ಮಲ್ಲಿ ಎಷ್ಟು ನಂಬಿಕೆಯಿದ್ದರೂ ಇಂಥಾ ವಿಷಯದಲ್ಲಿ ಅನುಮಾನ ಬಂದೇ ಬರುತ್ತೆ.

ಸುಬ್ಬಾಶಾಸ್ತ್ರಿ—ಇಲ್ಲ. ನಾನು ಸಾಕಾದಷ್ಟು ಮಂಕುಬೂದಿ ಎರಚಿದೇನೆ. (ಶಾರದೆ ಕೆಮ್ಮುವಳು) ಏನು ಬಹಳ ಕೆಮ್ಮು?

ಶಾರದೆ—ಹೌದು. ನನ್ನ ಎದೆಯಲ್ಲಿ ಬೆಂಕಿ ಹಾಕಿದ ಹಾಗಾಗಿದೆ.

ಸುಬ್ಬಾಶಾಸ್ತ್ರಿ—ಅನುಮಾನ ಬರುತ್ತೆ ಅನ್ನುವ ಹೆದರಿಕೆಯೇನೂ ಇಲ್ಲ...

ಶಾರದೆ—ಆದರೇನು ಇದು ಪಾಪವಲ್ಲವೆ? ನಿಮ್ಮಂಥವರಿಗೆ ಈ ಆಚರಣೆ ಸರಿಯೆ?

ಸುಬ್ಬಾಶಾಸ್ತ್ರಿ—ಶಾರದೆ, ಯಾರಾದರೂ ಹೆಂಡತಿಯಲ್ಲಿ ಶಂಕರಪ್ಪನಷ್ಟು ಅನಾದರವಾಗಿರುತಾರೆಯೆ? ನಾನು ಎಷ್ಟೇ ಆಗಲಿ ಹೊರಗಿನವನು. ನನ್ನ ಮಾತು ಕೇಳಿಕೊಂಡು ಹೆಂಡತಿಯ ಮಾತನ್ನೇ ನಂಬುವುದಿಲ್ಲವಲ್ಲ, ಅವನಿಗೆ ನಿಜವಾಗಿ ನಿನ್ನ ಮೇಲೆ ಪ್ರೀತಿಯಿದೆಯೆ? ಪ್ರೀತಿಯಿದ್ದೂ ನೀನು ಹೀಗೆ ಮಾಡಿದರೆ ಪಾಪ ಅನ್ನಬಹುದು.

ಶಾರದೆ—ಆದರೂ ಕೈ ಹಿಡಿದ ಗಂಡನಲ್ಲವೆ?

ಸುಬ್ಬಾಶಾಸ್ತ್ರಿ—ಅವನೇ ಕೈ ಬಿಟ್ಟುಬಿಟ್ಟಿದಾನಲ್ಲ! ಆದರವಿಲ್ಲ ಅಂದ ಮೇಲೆ ಕೈ ಬಿಟ್ಟ ಹಾಗೇ ತಾನೆ! ಇದರಲ್ಲೇನೂ ಪಾಪವಿಲ್ಲ. (ಎನ್ನುತ್ತಾ ಸ್ವಲ್ಪ ಮುಂದೆ ಬರುತ್ತಾನೆ. ಶಂಕರಪ್ಪ ಬಾಗಿಲಿನ ಹಿಂದಿನಿಂದ ಒಂದು ಕೋಲನು ಎತ್ತಿಕೊಂಡು ಈಚೆಗೆ ಬರುವನು. ಶಾರದೆ ಒಂದು ಕಡೆಗೆ ಹೋಗಿ ನಿಲ್ಲುತ್ತಾಳೆ.)

ಶಂಕರಪ್ಪ—(ಮಿತಿಮೀರಿದ ಕೋಪದಿಂದ)ಓಹೋ ಶಾಸ್ತ್ರಿಗಳೇ, ಹುಷಾರು! ಏನು ಸತ್ಯವಂತರು! ತಪಸ್ವಿಗಳು! ನಿನ್ನ ಜಪವೇನು ನಿನ್ನ....

ಸುಬ್ಬಾಶಾಸ್ತ್ರಿ—ಏನು ಶಂಕರ, ಇವರ ಮಸಲತ್ತು ಕೊನೆಗೂ....

ಶಂಕರಪ್ಪ—ಥೂ ಚಂಡಾಲ, ಹೊರಡು! ಇನ್ನು ಅರೆಘಳಿಗೆ ನನ್ನ ಮನೆಯಲ್ಲಿರ ಬೇಡ.

ಸುಬ್ಬಾಶಾಸ್ತ್ರಿ—ಇದರ ವಿಷಯ ಹೇಳುತೇನೆ ಕೇಳು....

ಶಂಕರಪ್ಪ—ಇನ್ನು ಮಾತಾಡಿದರೆ ಹಣ್ಣುಗಾಯಿ ನೀರುಗಾಯಿ ಮಾಡಿ ಬೀದಿಗೆ ದಬ್ಬಿಸಿಬಿಡುತೇನೆ. ತೊಲಗು!

ಸುಬ್ಬಾಶಾಸ್ತ್ರಿ—ಯಾರಿಗೆ ಹೇಳುತೀಯೆ ತೊಲಗು ಅಂತ? ನಿನಗೇನು ಅಧಿಕಾರ ಇಲ್ಲಿ? ಮನೆಯಿಂದ ನನ್ನ ಹೊರಡಿಸಬೇಕು ಅಂತ ನೀವೆಲ್ಲಾ ಈ ನೆವ ಹುಡುಕಿದೀರೋ? ಈ ಮನೆ ನನ್ನದು. ನಿಮ್ಮ ಮೋಸಕ್ಕೆಲ್ಲಾ ಜಗ್ಗು ವವನಲ್ಲ ನಾನು. ಮನೆಯಿಂದ ನಾವು ಹೊರಡಬೇಕೋ ನೀವೇ ಹೊರಡುತೀರೋ ನೊಡೋಣ. ಹೂಂ (ಹೊರಟುಹೋಗುತ್ತಾನೆ.)

ಶಾರದೆ—ಇದೇನು ಅಂದರೆ ಹೀಗಂತಾನೆ? ಮನೆ ಅವನದು ಅಂದರೇನು?

ಶಂಕರಪ್ಪ—ಅಯ್ಯೋ, ನನಗೆ ಏನೂ ತೋರುವುದಿಲ್ಲ. ಅವನ ಕೈಯಲ್ಲಿ ಸಿಕ್ಕಿ ಹಾಕಿಕೊಂಡು ಬಿಟ್ಟಿದೇನೆ.

ಶಾರದೆ—ಹಾಗಂದರೆ?

ಶಂಕರಪ್ಪ—ಮನೆ ಅವನ ಹೆಸರಿಗೆ ಬರೆದುಬಿಟ್ಟಿದೇನಲ್ಲ!

(ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತುಕೊಳ್ಳುತ್ತಾನೆ.)

ಪರದೆ

## ಐದನೆಯ ದೃಷ್ಯ

[ಹಜಾರದಲ್ಲಿ ಶಂಕರಪ್ಪನೂ ಕೃಷ್ಣಮೂರ್ತಿಯೂ ಕುಳಿತಿದಾರೆ.]

ಕೃಷ್ಣಮೂರ್ತಿ—ಈಗ ಏನು ಯೋಚನೆ ಮಾಡಿದೀಯೆ?

ಶಂಕರಪ್ಪ—ನನಗೆ ಏನೂ ತೋರುವುದಿಲ್ಲ

ಕೃಷ್ಣಮೂರ್ತಿ—ತುಂಬ ಕಷ್ಟಕ್ಕೆ ಸಿಕ್ಕಿದ ಹಾಗಾಯಿತು. ಮನೆ ಅವನ ಹೆಸರಿಗೆ ಬರೆದುಬಿಟ್ಟಿರುವಾಗ ನಾವು ಜೋರುಮಾಡುವುದಕ್ಕಾಗುವುದಿಲ್ಲ. ಏನಾದರೂ ಉಪಾಯದಲ್ಲಿ ಸಿಕ್ಕಿಸಿಕೊಳ್ಳಬೇಕು.

ಶಂಕರಪ್ಪ—ನಿನಗೆ ಅವನ ಸ್ವಭಾವ ಗೊತ್ತಿಲ್ಲ, ಕಿಟ್ಟು! ಉಪಾಯಕ್ಕೆ ಸಿಕ್ಕುತಾನೆಯೆ ಅವನು? ಎಂಥಾ ತಂತ್ರಿ! ಉಂಗುಷ್ಟದಿಂದ ನೆತ್ತಿಯವರೆಗೂ ವಿಷ ತುಂಬಿದೆ. ಬಾಯಲ್ಲಿ ಮಾತ್ರ ಅಮೃತ ಸುರಿದುಹೋಗುತ್ತೆ. .... ಇವನ್ನ ಮನೆಯಲ್ಲಿ ತಂದಿಟ್ಟುಕೊಂಡದ್ದು ಹಾವಿಗೆ ಹಾಲೆರೆದ ಹಾಗಾಯಿತು. ಈ ಶಾಸ್ತ್ರಿಗಳು, ಜೋಯಿಸರು, ಒಬ್ಬರನ್ನೂ ನಂಬಬಾರದು. ಅವರು ಕಾಲಿಟ್ಟ ಕಡೆ ಹಾಳು.

ಕೃಷ್ಣಮೂರ್ತಿ—ಸರಿಸರಿ. ನಿನ್ನದೆಲ್ಲಾ ಹುಚ್ಚು ಹುಚ್ಚು ಹೊಳೆಯೆಲ್ಲಾ ಕಲ್ಲು. ಬೆಂಕಿಗೆ ಬೀಳೋದಕ್ಕೆ ಹೋಗುತೀಯೆ, ಇಲ್ಲ ನೀರಿಗೆ ಬೀಳೋದಕ್ಕೆ ಹೋಗುತೀಯೆ. ಇವನೊಬ್ಬ ಹೀಗಾದರೆ ಎಲ್ಲಾ ಹೀಗೇ ಇರುತಾರೆಯೆ? ಸಾಚಇರೋರು ಎಷ್ಟೋ ಜನ ಇದಾರೆ. ಜನಗಳು ಹೇಳಿಕೊಳ್ಳುವುದೆಲ್ಲಾ ನಿಜ ಅಂತ ನಂಬದೆ ಸ್ವಲ್ಪ ಬುದ್ಧಿ ಉಪಯೋಗಿಸಬೇಕು ಅಷ್ಟೆ.

(ರಾಮು ಪ್ರವೇಶಿಸುತ್ತಾನೆ.)

ರಾಮು—ಏನಣ್ಣ, ಅವನೇನೋ ಮನೆ ತನ್ನದು ಅಂತಾನಂತೆ? ಅವನಪ್ಪ ಕಟ್ಟಿದ್ದ, ಮನೆಯನ್ನ! ಅವನಿಗೆ ನಿಮ್ಮ ದಾರಿಯೆಲ್ಲಾ ಸರಿಬೀಳುವುದಿಲ್ಲ. ಹಿಡಿದು ಬಾಯಿಗೆ ನೀರು ಕೇಳುವ ತನಕ ಹೊಡೆದರೆ ಸರಿ, ಆವಾಗ ದಾರಿಗೆ ಬರುತಾನೆ.

ಕೃಷ್ಣಮೂರ್ತಿ—ಸುಮ್ಮನಿರಪ್ಪ ಸದ್ಯಕ್ಕೆ. ಹೊಡೆದಾಟಕ್ಕೆ ಹೋಗಿ ಇನ್ನೇನಾದರೂ ತೊಂದರೆಗಿಟ್ಟುಕೊಂಡೀತು. ಈಗ ಇರುವ ಕಷ್ಟವೇ ಸಾಕಾಗಿದೆ.

(ಪಾರ್ವತಮ್ಮ, ಶಾರದೆ, ಸರಸ್ವತಿ, ಲಲಿತ ಇವರು ಪ್ರವೇಶಿಸುತ್ತಾರೆ.)

ಪಾರ್ವತಮ್ಮ—ಏನೋ ಮಗು, ಮನೆಯಲ್ಲೆಲ್ಲಾ ಅವಾಂತರ?

ಶಂಕರಪ್ಪ—ಏನೂ ಇಲ್ಲ ಅಮ್ಮ. ಎಲ್ಲಾ ನನ್ನ ಹುಚ್ಚುತನದ ಫಲ.

ಪಾರ್ವತಮ್ಮ—ಅಲ್ಲ ಕಣೋ ಮಗು, ಆ ಸುಬ್ಬಾಶಾಸ್ತ್ರಿಗಳ ಮೇಲೆ ಇಲ್ಲದೆ ಇದ್ದದ್ದನ್ನೆಲ್ಲಾ ಹೇಳುವುದೇನೊ, ಪಾಪ?

ಶಂಕರಪ್ಪ—ಪಾಪವೇನಮ್ಮ, ಪುಣ್ಯ? ಚಂಡಾಲ ಅವನು! ನಾನು ಅವನ್ನ ಮನೆಯಲ್ಲಿಟ್ಟುಕೊಂಡು ಆದರಣೆ ಮಾಡಿದ್ದಕ್ಕೆ ಫಲ ನೋಡಿದೆಯಾ? ಅಣ್ಣತಮ್ಮಂದಿರಿಗಿಂತ ಹೆಚ್ಚು ಅಂತ ತಿಳಿದುಕೊಂಡಿದ್ದೆ ಅವನ್ನ. ಲಲಿತನ್ನ ಕೊಟ್ಟು ಮನೆಯಲ್ಲೇ ಇರಿಸಿಕೊಳ್ಳಬೇಕು ಅಂತಿದ್ದೆ. ಅವನ್ನ ನಂಬಿ ನನ್ನ ಆಸ್ತಿಯನ್ನೇ ಅವನ ಹೆಸರಿಗೆ ಬರೆದೆ. ಈಗ ಅವನು ಮಾಡುವ ಪ್ರತ್ಯುಪಕಾರ ನೋಡಿದೆಯಾ? ನನ್ನ ಮನೆ ಅನ್ನ ತಿಂದುಕೊಂಡು, ಅವಳನ್ನ . ಆ .. ಈಗ ನನ್ನೇ ಮನೆ ಬಿಟ್ಟು ಹೊರಡು ಅಂತಾನಲ್ಲ! ನಾನು ಮೊದಲು ನೋಡಿದಾಗ ನಿಲ್ಲುವುದಕ್ಕೆ ನೆರಳಿಲ್ಲದೆ ತಿನ್ನುವುದಕ್ಕೆ ಹಿಟ್ಟಿಲ್ಲದೆ ಅಲೆಯುತಾ ಇದ್ದ!

ಪಾರ್ವತಮ್ಮ—ಶಾಸ್ತ್ರಿಗಳು ಹೀಗೆ ಮಾಡಿದರು ಅಂತ ನಾನು ಎಂದಿಗೂ ನಂಬಲಾರೆ. ಇರಲಾರದು.

ಶಂಕರಪ್ಪ—ಇರಲಾರದು! ನಾನೇನು........

ಪಾರ್ವತಮ್ಮ—ಒಳ್ಳೆಯ ಜನರನ್ನು ಕಂಡರೆ ಮಿಕ್ಕವರಿಗೆ ಯಾವಾಗಲೂ ಹೊಟ್ಟೆಯಕಿಚ್ಚು

ಶಂಕರಪ್ಪ—ಏನಮ್ಮ ನೀನು ಹೇಳುವುದು? ನಾನು........

ಪಾರ್ವತಮ್ಮ—ನೋಡು, ನಿಮ್ಮ ಮನೆಯಲ್ಲಿ ಒಬ್ಬರಿಗೂ ಅವರನ್ನ ಕಂಡರೆ ಆಗದು.

ಶಂಕರಪ್ಪ—ಆಗದು, ಹೌದು. ಆದರೆ ನಾನೇ . ....

ಪಾರ್ವತಮ್ಮ—ಅದರಿಂದಲೇ ಇಲ್ಲದ್ದು ಸಲ್ಲದ್ದು ಎಲ್ಲಾ ಸೇರಿಸಿಕೊಂಡು ಹೇಳಿದಾರೆ.

ಶಂಕರಪ್ಪ—ನಾನೇ ಕಿವಿಯಾರ ಕೇಳಿ........

ಪಾರ್ವತಮ್ಮ—ಹುಟ್ಟಿಸಿಕೊಂಡು ಹೇಳೋರಿಗೇನೋ ಮಗು? ಒಂದು ಸುಳ್ಳಾದರೇನು, ಸಾವಿರ ಸುಳ್ಳಾದರೇನು?

ಶಂಕರಪ್ಪ—ಸ್ವಲ್ಪ ಕೇಳಮ್ಮ. ಇದು ನಡೆದಾಗ .......

ಪಾರ್ವತಮ್ಮ—ಜನದ ನಾಲಿಗೆ ತಡೆಯೋರು ಯಾರೋ?

ಶಂಕರಪ್ಪ—ಅಯ್ಯೋ ರಾಮು! ನಾನೇ ಕಿವಿಯಾರ ಕೇಳಿದೆ ಅಂತ ಬಡಕೊಳ್ಳುತಾ ಇದೇನೆ. ತಿರುಗಿ ಅದೇ ಮಾತಾಡುತೀಯಲ್ಲ!

ಪಾರ್ವತಮ್ಮ—ಆದರೇನೋ ಮಗು, ಕೇಳಿದ್ದಕ್ಕೆ ನಾವು ತಪ್ಪು ಅರ್ಥ ಮಾಡಿಕೊಳ್ಳುವುದಿಲ್ಲವೇನೋ? ನೀನು ಆತುರಪಟ್ಟುಬಿಟ್ಟು, ಪಾಪ, ಅವರ ಮೇಲೆ ಕೆಟ್ಟ ಹೆಸರು ಹೊರಿಸಿದೆಯಲ್ಲ!

ಶಂಕರಪ್ಪ—ಆತುರಪಟ್ಟೆನೇ, ನಾನು? ಎಷ್ಟು ಅಂತ ಸುಮ್ಮನಿರುವುದು!........ ನನ್ನ ಬಾಯಿಗೆ ಏನೇನೋ ಬರುತ್ತೆ! ನಿನ್ನ ಕೈಲಿ ಮಾತಾಡುತಾ ಇದ್ದರೆ ನನಗೆ ಹುಚ್ಚುಹಿಡಿದು ಹೋಗುತ್ತೆ.

ಕೃಷ್ಣಮೂರ್ತಿ—ಸುಮ್ಮನೆ ಇದನ್ನ ಚರ್ಚೆಮಾಡಿದ್ದರಿಂದ ಏನಾದ ಹಾಗಾಯಿತು? ಈಗ ಇವನ ಬಲೆಯಿಂದ ತಪ್ಪಿಸಿಕೊಳ್ಳುವುದು ಹೇಗೆ ಅಂತ ನೋಡಬೇಕು

ರಾಮು—ನಿಜವಾಗಿಯೂ ಅವನು ಮನೆ ತನ್ನದು ಅಂತಾನೆಯೆ?

ಶಾರದೆ—ಎಲ್ಲೋ ಆ ಘಳಿಗೆಯಲ್ಲಿ ಬಾಯ ಬಡಿದುಬಿಟ್ಟು ತಪ್ಪಿಸಿಕೊಂಡು ಹೋಗೋಣ ಅಂತ ಹಾಗಂದನೋ ಏನೋ.

ಕೃಷ್ಣಮೂರ್ತಿ—ಅವನೇನು ತಟ್ಟಹುಚ್ಚನಲ್ಲ. ಮನೆ ತನ್ನದು ಅಂತ ಸಾಧಿಸುವುದಕ್ಕಾದರೆ ಸಾಧಿಸಿಯೇ ಬಿಡುತ್ತಾನೆ.

ಶಂಕರಪ್ಪ—ಈಗೇನು ಮಾಡುವುದು?

ಕೃಷ್ಣಮೂರ್ತಿ—ನೀನು ಒಬ್ಬರ ಮಾತನ್ನೂ ಕೇಳದೆ ಹೀಗೆ ಮಾಡಿಟ್ಟುಬಿಟ್ಟಿದೀಯೆ. ಈಗ ಏನೂ ದಾರಿ ತೋರುವುದಿಲ್ಲ.

(ಬಾಗಿಲು ತಟ್ಟಿದ ಸದ್ದಾಗುತ್ತದೆ.)

ಶಂಕರಪ್ಪ—ಯಾರು ನೋಡು ಸರಸು. ಏನೋ ಕೆಲಸದಲ್ಲಿದಾರೆ ಅಂತ ಹೇಳಿ ಕಳುಹಿಸಿಬಿಡಮ್ಮ.

(ಸರಸ್ವತಿ ಬಾಗಿಲಿನ ಬಳಿಗೆ ಹೋಗುತ್ತಾಳೆ. ಅಮೀನ ಗೋವಿಂದಯ್ಯ ಪ್ರವೇಶಿಸುತ್ತಾನೆ.)

ಗೋವಿಂದಯ್ಯ—(ಬಾಗಿಲಿನ ಬಳಿಯಲ್ಲೇ ನಿಂತುಕೊಂಡು) ಶಂಕರಪ್ಪನವರು ಇದಾರೆಯೇನಮ್ಮ?

ಸರಸ್ವತಿ—ಏನೋ ಕೆಲಸದಲ್ಲಿದಾರೆ. ಆಮೇಲೆ ಬನ್ನಿ.

ಗೋವಿಂದಯ್ಯ— ಸ್ವಲ್ಪ ಆಗತ್ಯವಾಗಿ ನೋಡಬೇಕಾಗಿತ್ತು.

ಸರಸ್ವತಿ—ಯಾರು ಬಂದಿದಾರೆ ಅಂತ ಹೇಳಲಿ?

ಗೋವಿಂದಯ್ಯ—ಸುಬ್ಬಾಶಾಸ್ತ್ರಿಗಳ ಕಡೆಯಿಂದ ಯಾರೋ ಬಂದಿದಾರೆ ಅಂತ ಹೇಳಿಬಿಡಿ.

ಸರಸ್ವತಿ—(ಹಿಂತಿರುಗಿ ಒಳಗೆ ಬಂದು)ಯಾರೋ ಆ ಶಾಸ್ತ್ರಿಗಳ ಕಡೆಯವರಂತೆ.

ಶಂಕರಪ್ಪ—(ಕೃಷ್ಣಮೂರ್ತಿಗೆ)ಏನಾದರೂ ತೀರ್ಮಾನ ಮಾಡಿಕೊಳ್ಳೋಣ ಅಂತ ಹೇಳಿ ಕಳಿಸಿದಾನೋ ಏನೋ.

ಕೃಷ್ಣಮೂರ್ತಿ—ವಿಚಾರಿಸು ನೋಡೋಣ. ಕೋಪಮಾಡಿಕೊಳ್ಳದೆ ನಿಧಾನ ವಾಗಿ ಮಾತ್ರ ಮಾತನಾಡು

ಶಂಕರಪ್ಪ— ಯಾರು, ಒಳಕ್ಕೆ ಬನ್ನಿ.

(ಗೋವಿಂದಯ್ಯ ಒಳಗೆ ಬರುತ್ತಾನೆ. ಕೈ ಹೊಸಕಿಕೊಳ್ಳುತ್ತಾ, ಅರ್ಥ ವಿಲ್ಲದ ದೇಶಾವಾರದ ನಗೆಯನ್ನು ನಗುತ್ತಾ ಮಾತಾಡುವನು.)

ಗೋವಿಂದಯ್ಯ—ನಮಸ್ಕಾರ. ನನ್ನ ಪರಿಚಯವಿಲ್ಲವೇನೋ ತಮಗೆ. ತಮ್ಮ ಯಜಮಾನರನ್ನು ಚೆನ್ನಾಗಿ ಬಲ್ಲೆ ನಾನು........ಹಹಹ........ಎಲ್ಲಾ ಕ್ಷೇಮ ತಾನೆ?

ಶಂಕರಪ್ಪ—ಯಾರೋ ತಮ್ಮ ಗುರುತಿಲ್ಲ........ತಮ್ಮ ನಾಮಧೇಯ?

ಗೋವಿಂದಯ್ಯ—ಗೋವಿಂದಯ್ಯ ಅಂತ ನನ್ನ ಹೆಸರು. ಕೃಷ್ಣರಾಜಪೇಟೆ ತಾಲ್ಲೂಕು ನಮ್ಮದು. ಈಗ ಇಲ್ಲೇ ಅಮೀನನಾಗಿದೇನೆ. ಮೂವತ್ತು ವರ್ಷದಿಂದಲೂ ಅದೇ ಕೆಲಸದಲ್ಲೇ ಇದೇನೆ...... ಈ ಮನೆ ಏನೋ ಸುಬ್ಬಾಶಾಸ್ತ್ರಿಗಳ ಹೆಸರಿನಲ್ಲಿದೆಯಂತೆ........ ಅದಕ್ಕೆ........ ಅವರಿಗೆ ಮನೆಯನ್ನ....... ಖಾಲಿ ಮಾಡಿಕೊಡಬೇಕು ಅಂತ... ಅದಕ್ಕೋಸ್ಕರ ಬಂದೆ.

ಶಂಕರಪ್ಪ— ಖಾಲಿ ಮಾಡಿಕೊಡಬೇಕಂತೋ ಮನೆಯನ್ನ?... ....

ಗೋವಿಂದಯ್ಯ—ಕೋಪಮಾಡಬಾರದು. ಕೋರ್ಟಿಗೆ ಹೋದರೂ ಅಷ್ಟೇ. ತಾವೇ ತಮ್ಮ ಪತ್ರಕ್ಕೆ ಪ್ರತಿಯಾಗಿ ಹೋಗುವುದಕ್ಕಾಗುತ್ತೆಯೆ?

ರಾಮು—ಯಾವನೋ ಒದ್ದೋಡಿಸು ಅಣ್ಣ. ನಡಿಯೋ ಆಚೆಗೆ!

ಗೋವಿಂದಯ್ಯ—ನಿನ್ನ ಕೇಳಲಿಲ್ಲ ಕಣಯ್ಯ, ನೀನು ಈ ಮಾತಿಗೆ ಬರಬೇಡ. (ಶಂಕರಪ್ಪನಿಗೆ) ತಮಗೆ ವಿಷಯ ಗೊತ್ತೇ ಇದೆ ಹಹಹ... ನಾನೇನೂ

ಹೇಳಬೇಕಾಗಿಯೇ ಇಲ್ಲ.

ಶಂಕರಪ್ಪ—ಆದರೆ ಈಗ ಈ ವ್ಯಾಜ್ಯ .......

ಗೋವಿಂದಯ್ಯ—ಸರಿ. ನನಗೆ ತಿಳಿಸುವೆ, ತಾವು ಅಡಚಣೆ ಮಾಡುವುದಿಲ್ಲ ಅಂತ?

ಶಂಕರಪ್ಪ— ಇದರಲ್ಲಿ ಒಂದು ವಿಚಾರ .......

ಗೋವಿಂದಯ್ಯ—ನಿಜ, ತಾವು ಹೇಳುವುದು ನಿಜ. ಒಪ್ಪತಕ್ಕ ಮಾತೇ. ಪತ್ರ ಬರೆದು ಎಲ್ಲಾ ಆಗಿರುವಾಗ .....

ಶಂಕರಪ್ಪ—ನನ್ನ ಮಾತು ಸ್ವಲ್ಪ ತಗೊಳ್ಳಿ. ಇದು........

ಗೋವಿಂಯ್ಯ—ನ್ಯಾಯ ಅಂದೆನಲ್ಲ, ನ್ಯಾಯ. ತಾವು ಇಂಥವರು ಅಂತ ಗೊತ್ತಾದ ಮೇಲೆ........ಹಹಹ........ಮತ್ತೆ ಯಾರಾದರೂ ಬಂದು ತೊಂದರೆ ಕೊಟ್ಟಾರು ಅಂತ ನಾನೇ ಈ ಕೆಲಸಕ್ಕೆ ಹಾಕಿಸಿಕೊಂಡೆ. ಇಂಥ ಸಮಯದಲ್ಲಿ ತುಂಬ ತೊಂದರೆ ಕೊಡಬಹುದು ನೋಡಿ. ಅಂದರೆ ತಾವು ಬಹಳ ಗೌರವಸ್ಥರು ಅಂತ .......ಅನಾನುಕೂಲವಾಗದೆ ಇರಲಿ ಅಂತ........

ಶಂಕರಪ್ಪ—ಮನೆ ಬಿಟ್ಟು ಹೋಗು ಅಂದ ಮೇಲೆ ಅನಾನುಕೂಲವಲ್ಲದೆ ಮತ್ತೇನು?

ಗೋವಿಂದಯ್ಯ—ಏನೋ ಸ್ವಲ್ಪ....... ಹಹಹ........ಇದೆಯಲ್ಲ! ಒಂದೆರಡು ದಿನ ಅವಕಾಶ ಮಾಡಿಕೊಡಬಹುದು. ..... ನಿಂತ ಮೆಟ್ಟಿನಲ್ಲಿ ಹೊರಡಬೇಕು ಅಂದರೆ ಯಾರಿಗೆ ತಾನೆ ಸಾಧ್ಯ!

ಶಂಕರಪ್ಪ—(ಪಾರ್ವತಮ್ಮನಿಗೆ) ನೋಡಿದೆಯಾ ಅಮ್ಮ. ಈಗಲಾದರೂ ತಿಳಿಯಿತೆ, ನಿಮ್ಮ ಶಾಸ್ತ್ರಿಯ ಗುಣ?

ಪಾರ್ವತಮ್ಮ—ಎಲ್ಲಾದರೂ ಉಂಟೇನೋ ಮಗು, ಇಂಥಾ ಜನ! ಋಷಿಯ ಹಾಗಿದ್ದನಲ್ಲೋ ಆ ಮುಂಡೆಗಂಡ!

ಸರಸ್ವತಿ—ಇಲ್ಲ ಅಜ್ಜಿ, ಸುಮ್ಮನೆ ಅವರನ್ನ ದೂರಬಾರದು. ಐಶ್ವರ್ಯ ಅನ್ನುವುದು ಕೆಟ್ಟದು. ಅದಿದ್ದರೆ ಹೆಮ್ಮೆ. ಸದಾ ಅದರ ಮೇಲೇ ಯೋಚನೆ. ಈ ತೊಂದರೆ ಅಣ್ಣನಿಗೆ ಯಾಕೆ ಪಾಪ ಅಂತ, ಶಾಸ್ತ್ರಿಗಳು........

ಶಾರದೆ—ಸುಮ್ಮನಿರಮ್ಮ ಸರಸು, ನೀನು.

ಕೃಷ್ಣಮೂರ್ತಿ—ಇದೆಲ್ಲಾ ಹಾಗಿರಲಿ ಭಾವ ಈಗ ಈ ವಿಷಯ........

ಗೋವಿಂದಯ್ಯ—ಹೌದು .......ಈ ವಿಷಯ........

(ಸುಬ್ಬಾಶಾಸ್ತ್ರಿ ಪ್ರವೇಶಿಸುತ್ತಾನೆ.)

ಸುಬ್ಬಾಶಾಸ್ತ್ರಿ—ಏನು ಅವಿಾನರೆ, ಇನ್ನೂ ಏನೂ ಕೆಲಸವಾದ ಹಾಗಿಲ್ಲ?

ಶಂಕರಪ್ಪ—ಚಂಡಾಲ, ನನ್ನ ಉಪ್ಪು ತಿಂದು ನನಗೇ ಎರಡು ಬಗೆಯು ತೀಯಾ........

ಸುಬ್ಬಾಶಾಸ್ತ್ರಿ—ನೀನು ಏನು ಬೈದರೂ ಬೈಯಬಹುದು. ನನ್ನ ಕರ್ತವ್ಯವನ್ನು ನಾನು ಬಿಡುವುದಕ್ಕಾಗುವುದಿಲ್ಲ. ಆ ಸಂದರ್ಭದಲ್ಲಿ ಏನು ಬಂದರೂ ಅನುಭವಿಸಬೇಕು.

ಕೃಷ್ಣಮೂರ್ತಿ—ಅಹಹ, ಏನು ಕರ್ತವ್ಯ ಶ್ರದ್ಧೆ! ಕಲಿಯುಗದಲ್ಲಿ ನಿನ್ನಂಥಾ ವರೂ ಇದಾರಲ್ಲ!

ಸುಬ್ಬಾಶಾಸ್ತ್ರಿ—ನಿಮ್ಮ ಮಾತಿನಿಂದೇನು! ಈಗ ನನ್ನ ಹೆಸರಿನಲ್ಲಿರುವ ಆಸ್ತಿ ಸತ್ಕಾರ್ಯಕ್ಕಾಗಿ ವಿನಿಯೋಗವಾಗಬೇಕಾಗಿದೆ. ಭಗವಂತನ ಪ್ರೇರಣೆ ಯಿಂದ ನಾನು ಈ ಕೆಲಸಕ್ಕೆ ಕೈಹಾಕಿದೇನೆ. ಅದಕ್ಕೋಸ್ಕರ ಏನು ಕಷ್ಟಬಂದರೂ ಅದು ಸುರಕ್ಷಿತವಾಗಿರುವ ಹಾಗೆ ನೋಡಿಕೊಳ್ಳಬೇಕು.

ಶಂಕರಪ್ಪ—ನಾನು ಎಷ್ಟು ಉಪಕಾರ ಮಾಡಿದೆ!....ಎಳ್ಳಷ್ಟಾದರೂ ಸ್ಮರಣೆ ಯಿದೆಯೆ ನಿನಗೆ!

ಸುಬ್ಬಾಶಾಸ್ತ್ರಿ—ಹೌದು ಶಂಕರ. ನಿನ್ನಿಂದ ನನಗೆ ಬಹಳ ಉಪಕಾರವಾಗಿದೆ. ನಾನು ಎಂದೆಂದಿಗೂ ನಿನಗೆ ಋಣಿ. ಆದರೆ ಕರ್ತವ್ಯ ದೊಡ್ಡದು. ನೀನಲ್ಲ, ನನ್ನ ಸ್ವಂತ ತಾಯಿತಂದೆಗಳೇ ಆಗಲಿ, ಕರ್ತವ್ಯಕ್ಕಿಂತ ಹೆಚ್ಚಲ್ಲ. ಅದಕ್ಕೆ ಅಡ್ಡವಾಗಿ ಯಾರೇ ಬರಲಿ, ಅವರನ್ನು ತ್ಯಜಿಸ ಬೇಕಾಗುತ್ತೆ.

(ರಾಮು ರೇಗಿಕೊಂಡು ಸುಬ್ಬಾಶಾಸ್ತ್ರಿಯ ಕಡೆಗೆ ನುಗ್ಗುತ್ತಾನೆ. ಕೃಷ್ಣ ಮೂರ್ತಿ ಅವನನ್ನು ತಡೆಯುತ್ತಾನೆ.)

ರಾಮು—ಬಿಡು ಕಿಟ್ಟು, ನನಗೂ ಕರ್ತವ್ಯ ಇದೆ. ಇವನ್ನ ಜೋಡಿನಲ್ಲಿ ಹೊಡೆದೇ ಬಿಡುತೇನೆ. ಆಮೇಲೆ ಕೋರ್ಟಿಗೆ ಹೋಗಲಿ!

ಕೃಷ್ಣಮೂರ್ತಿ—ಸುಮ್ಮನಿರೋ. (ಸುಬ್ಬಾಶಾಸ್ತ್ರಿಗೆ)ಈಗ ನಿನ್ನ ಗುಣವೆಲ್ಲಾ ಬಯಲಿಗೆ ಬಿದ್ದ ಮೇಲೆ ..

(ಕೃಷ್ಣಮೂರ್ತಿ ಮಾತಾಡುತ್ತಿರುವಾಗ ಇನ್ಸ್‌ಪೆಕ್ಟರು ಶ್ರೀನಿವಾಸ ರಾಯನೂ ಇಬ್ಬರು ಕಾನ್ಸ್‌ಟೇಬಲರೂ ಪೋಲೀಸಿನವರ ಉಡುಪನ್ನು ಧರಿಸಿ ಪ್ರವೇಶಿಸುತ್ತಾರೆ.)

ಸುಬ್ಬಾಶಾಸ್ತ್ರಿ—ನಿಮ್ಮನ್ನೆಲ್ಲಾ ಮೆಚ್ಚಿಸಬೇಕಾಗಿಲ್ಲ ನಾನು. ಭಗವಂತ ..

ಇನ್ಸ್‌ಪೆಕ್ಟರು—(ಸುಬ್ಬಾಶಾಸ್ತ್ರಿಯ ಬೆನ್ನಿನಮೇಲೆ ಕೈಯಿಟ್ಟು) ನಿನ್ನ ದಸ್ತಗಿರಿ ಮಾಡಿದೇನೆ.

ರಾಮು—ಆಹಾ, ಭಗವಂತ, ಶಾಸ್ತ್ರಿಗಳೇ ಭಗವಂತ ಸರಿಯಾಗಿ ಮಾಡಿದ ತಮಗೆ!

ಸುಬ್ಬಾಶಾಸ್ತ್ರಿ—ಏನಿದು? ಯಾವ ಹಕ್ಕಿನ ಮೇಲೆ ನನ್ನ ದಸ್ತಗಿರಿ ಮಾಡಿದಿರಿ?

ಇನ್ಸ್‌ಪೆಕ್ಟರು—ಮುಚ್ಚು ಬಾಯಿ, ಬದ್ಮಾಷ್! ಮಾತಾಡದೆ ನಡಿ ಇವರ ಜೊತೆಯಲ್ಲಿ! (ಶಂಕರಪ್ಪನಿಗೆ)ಏನೂ ಆತಂಕ ಪಡಬೇಡಿ ಶಂಕರಪ್ಪ ನವರೆ, ನಿಮ್ಮ ದಾನಪತ್ರಗಳಿಂದೇನೂ ತೊಂದರೆ ಬರುವುದಿಲ್ಲ. ಇವನು ಬಹಳ ದಿನದಿಂದಲೂ ಕೇ. ಡಿ. ಪಟ್ಟಿಯಲ್ಲಿದ್ದವನು. ಹಿಂದೆ ಒಂದೆರಡು ಸಲ ಶಿಕ್ಷೆಯೂ ಆಗಿದೆ ಇವನಿಗೆ. ಈಚೆಗೆ ಇವನ್ನ ಮದರಾಸು ಪೋಲೀಸಿ ನವರು ಹುಡುಕುತಾ ಇದ್ದರು. ಅಲ್ಲಿಂದ ಹೆಸರು ಬದಲಾಯಿಸಿಕೊಂಡು ತಪ್ಪಿಸಿಕೊಂಡು ಬಂದಿದಾನೆ. ನಿಮ್ಮ ಮನೆಗೆ ಬಂದ ಸ್ವಲ್ಪ ದಿನದ ಮೇಲಿಂದಲೂ ನಮಗೆ ಇವನ ಮೇಲೆ ಗುಮಾನಿ ಇದ್ದೇ ಇತ್ತು.

ರಾಮು—ಅಸತ್ತು ಬಂದು ಶಾಸ್ತ್ರಿಯ ವಿಷಯ ವಿಚಾರಿಸಿಕೊಂಡು ಹೋದರು ಅಣ್ಣ.

ಇನ್ಸ್‌ಪೆಕ್ಟರು—ವಿಷಯ ಚೆನ್ನಾಗಿ ತಿಳಿದ ಮೇಲೆ ದಸ್ತಗಿರಿ ಮಾಡುವುದು ಒಳ್ಳೆಯದು ಅಂತ ಇವನ ಮೇಲೆ ಕಣ್ಣಿಟ್ಟು ಸುಮ್ಮನೆ ಇದ್ದೆವು. ನೀವು ಅವನ ಮಾತು ಕೇಳಿಕೊಂಡು ರಾಮೂನ ಮನೆ ಬಿಟ್ಟು ಓಡಿಸಿದ್ದು, ನಿಮ್ಮ ಆಸ್ತಿ ಅವನಿಗೆ ಬರೆದುಕೊಟ್ಟಿದ್ದು, ಎಲ್ಲಾ ನಮಗೆ ಗೊತ್ತು. ಆತಂಕಪಡಬೇಡಿ. ಅದು ಕೋರ್ಟಿನಲ್ಲಿ ನಿಲ್ಲುವ ಹಾಗಿಲ್ಲ. ಅಂತೂ ಸ್ವಲ್ಪದರಲ್ಲಿ ಬಹಳ ಕಷ್ಟಕ್ಕೆ ಸಿಕ್ಕಿಕೊಳ್ಳುತಾ ಇದ್ದಿರಿ.

ಸರಸ್ವತಿ—ಇಷ್ಟರಲ್ಲೇ ಪಾರಾದೆವಲ್ಲ ಸದ್ಯಕ್ಕೆ!.

ಶಾರದೆ—ಪೋಲೀಸಿನವರು ಬರುತ್ತಲೆ ಇನ್ನೇನು ವಿಪತ್ತು ಬಂತೋ ಅಂತಿದ್ದೆ.

ಪಾರ್ವತಮ್ಮ—(ಇನ್ಸ್‌ಪೆಕ್ಟರಿಗೆ)ದೇವರೇ ಕಾಪಾಡಿದ ಹಾಗಾಯಿತಪ್ಪ, ನೀವು

ಬಂದದ್ದು.

ಇನ್ಸ್‌ಪೆಕ್ಟರು—ಹಾಗಂದರೇನಮ್ಮ. ನಮ್ಮನ್ನ ಸಂಬಳ ಕೊಟ್ಟು ಇಟ್ಟಿರುವುದು ಯಾತಕ್ಕೆ? (ಕಾನ್ಸ್‌ಟೆಬಲರಿಗೆ) ತಗೊಂಡು ನಡಿಯಿರೋ ಇವನ್ನ. ಠಾಣೆಗೆ!

ಸರಸ್ವತಿ—ನೋಡೆ, ಲಲಿತ, ನಿನ್ನ ಗಂಡನ್ನ ಜೈಲಿಗೆ ಎಳೆದುಕೊಂಡು ಹೋಗು ತಾರಲ್ಲೆ!

ರಾಮು—ಏನು ಶಾಸ್ತ್ರಿಗಳೆ, ಕರ್ತವ್ಯ ಏನನ್ನುತ್ತೆ?

(ಇನ್ಸ್‌ಪೆಕ್ಟರೂ, ಪೋಲೀಸಿನವರೂ, ಸುಬ್ಬಾಶಾಸ್ತ್ರಿಯೂ ಹೋಗುತ್ತಾರೆ.)

ಕೃಷ್ಣಮೂರ್ತಿ—ಬಿಡು ರಾಮು. ಈಗ ಅವನ್ನ ಹೀಯಾಳಿಸಬಾರದು ಇಷ್ಟು ಮಟ್ಟಿಗೆ ಎಲ್ಲಾ ಒಳ್ಳೆಯದೇ ಆಯಿತಲ್ಲ! ಭಾವ, ಗೊತ್ತುಮಾಡಿದ್ದ ಲಗ್ನದಲ್ಲೇ ಅನಂತನಿಗೂ ಲಲಿತನಿಗೂ ಮದುವೆ ನಡೆಯಬಹುದಲ್ಲ?

ಶಂಕರಪ್ಪ—ಆಗಬಹುದು. ಶುಭಸ್ಯ ಶೀಘ್ರಂ.

ಪರದೆ